CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೨೪, ೨೦೦೫ (ಫಾಲ್ಗುಣ ೫, ಶಕ ವರ್ಷ ೧೯೨೬) | ಸಂಚಿಕೆ ೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪುರ ಜಿಲ್ಲೆ ವಿಜಾಪುರ ಇವರ ನ್ಯಾಯಾಲಯದಲ್ಲಿ

**ಉಪಸ್ಥಿತರು :** ಶ್ರೀ ಕೆ. ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ವಿಜಾಪುರ ಜಿಲ್ಲೆ ವಿಜಾಪುರ.

**ಪಿರ್ಯಾದಿದಾರರು :** ಶ್ರೀ ಎಸ್. ಬಿ. ಕೆಂಗಲಗುತ್ತಿ ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಗಾಂಧಿಚೌಕ ಪೋಲಿಸ್ ಠಾಣೆ ವಿಜಾಪುರ.

**ವಿರುದ್ಧ :**

**ಪ್ರಥಮ ಮಾಹಿತಿ ವರದಿ ನಂ: 29:2003, ದಿನಾಂಕ: 27ನೇ ಜನವರಿ 2003**

**ಆರೋಪಿತರು :**
1. ಜಯರಾಮ ನಿಂಗೇಗೌಡ, ಸಾ: ನೆಲಮಂಗಲ ಕುವೆಂಪು ನಗರ, ಬೆಂಗಳೂರು.
2. ಸೈಯದ್ ಬಾಬಾ ಮಹಮ್ಮದ್‌ಗಫೂರ ಸಾ: ಬೆಂಗಳೂರು ವಿಜಯನಗರ 17ನೇ ಕ್ರಾಸ್ ಬೆಂಗಳೂರು
3. ನಿಂಗಪ್ಪ ಬಸವರಾಜ ಬಿರಾದಾರ ಸಾ: ಬಿಜಾಪುರ
4. ಶ್ರೀ ಲಿಯೋ ಜೋಶೆಫ್, ಆರ್ಯನ್, ನಂ. 365-1-ಎ, ಪಿ. ಬಿ. ರೋಡ್, ಬೆಳಗಾಂವ (ವಾಹನದ ಮಾಲೀಕರು)

**ಪ್ರಸ್ತಾವನೆ:**

ದಿನಾಂಕ: 27.1.2003 ರಂದು ಪಿರ್ಯಾದಿದಾರರು ಭಾತ್ಮಿಯ ಮೇರೆಗೆ, ಅನಧಿಕೃತವಾಗಿ ದೇಶಿಯವಾದ ವಿದೇಶಿ ಮದ್ಯದ ಬಾಟ್ಲಿಗಳನ್ನು ಟ್ರಕ್ ನಂ: ಕೆಎ:22:969ರ ವಾಹನದಿಂದ ಮದ್ಯದ ಬಾಟ್ಲಿಗಳನ್ನು ಇಳಿಸುತ್ತಿದ್ದಾರೆ ಎಂಬ ಭಾತ್ಮಿಯ ಮೇರೆಗೆ, ಪಿರ್ಯಾದಿದಾರರು ಕೆಎ:22:969 ವಾಹನ ಶೋಧನೆ ಮಾಡಿ ರಹದಾರಿ ಪತ್ರ ವಗೈರೆ ಹಾಜರುಪಡಿಸದೇ ಇರುವುದರಿಂದ ಪಿರ್ಯಾದಿದಾರರು ಪಂಚನಾಮ ಕ್ರಮವನ್ನು ಜರುಗಿಸಿ ಮಾದರಿ ಸೀಸೆಗಳನ್ನು ತೆಗೆದು ಪೊಲೀಸ್ ಠಾಣೆಯ ಗುನ್ನೆ ನಂ: 29:2003 ರಂತೆ ಗುನ್ನೆ ದಾಖಲು ಮಾಡಿ ಸದರಿ ಪ್ರಕರಣದಲ್ಲಿ ಆರೋಪಿತರಾದ 1) ಜಯರಾಮ ತಂದೆ ನಿಂಗೇಗೌಡ, ರವರನ್ನು ದಿನಾಂಕ: 28.01.2003 ರಂದು ಬೆಳಿಗ್ಗೆ 11.00 ಗಂಟೆಗೆ ದಸ್ತಗಿರಿ ಮಾಡಿ ಪಿರ್ಯಾದಿದಾರರು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತಾರೆ. ದಿನಾಂಕ: 3.2.2003 ರಂದು ಜಪ್ತಾದ ಮುದ್ದೇಮಾಲು ಹಾಗೂ ಲಾರಿಯನ್ನು ಮತ್ತು ಇದರಲ್ಲಿ ಸಂಗ್ರಹಿಸಿದ ಕಾಗದ ಪತ್ರಗಳನ್ನು ಮುಂದಿನ ತನಿಖೆಗೋಸ್ಕರ ಅಬಕಾರಿ ಉಪ ತನಿಖಾಧಿಕಾರಿಗಳು ವಿಜಾಪುರ ನಗರ ಉಪವಲಯ ಇವರಿಗೆ ವರ್ಗಾಯಿಸಿ ಹಸ್ತಾಂತರ ಮಾಡಿರುತ್ತಾರೆ. ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು ವಿಜಾಪುರ ನಗರ ಉಪವಲಯರವರು ಪಿರ್ಯಾದಿದಾರರು ಹಸ್ತಾಂತರ ಮಾಡಿದ ಎಲ್ಲಾ ದಾಖಲೆಗಳನ್ನು ಮತ್ತು ಜಪ್ತು ಮಾಡಿದ ಟ್ರಕ್ ಮತ್ತು ಮಾದಕ ದ್ರವ್ಯವುಳ್ಳ ದೇಶಿಯವಾದ ವಿದೇಶಿ ಮದ್ಯದ ಬಾಟ್ಲಿಗಳನ್ನು ಈ ಕೆಳಕಂಡಂತೆ ಹಸ್ತಾಂತರ ಮಾಡಿರುತ್ತಾರೆ.

| | | | | | |
|---|---|---|---|---|---|
| 1. | ಖೋಡೆಜ ತ್ರಿಎಕ್ಸ್ ರಮ್ | 180 | ಮಿಲಿಯ | 208 | ರಟ್ಟಿನ ಪೆಟ್ಟಿಗೆಗಳು |
| 2. | ಖೋಡೆಜ ತ್ರಿಎಕ್ಸ್ ರಮ್ | 750 | ಮಿಲಿಯ | 09 | ಪೆಟ್ಟಿಗೆಗಳು |
| 3. | ಖೋಡೆಜ ತ್ರಿಎಕ್ಸ್ ರಮ್ | 375 | ಮಿಲಿಯ | 24 | ರಟ್ಟಿನ ಪೆಟ್ಟಿಗೆಗಳು |
| 4. | ಡೈರೆಕ್ಟರ್ ಸ್ಪೇಶಲ್ ವಿಸ್ಕಿ | 180 | ಮಿಲಿಯ | 10 | ರಟ್ಟಿನ ಪೆಟ್ಟಿಗೆಗಳು |
| 5. | ಒಲ್ಡ್ ಟಾವರಿನ ವಿಸ್ಕಿ | 180 | ಮಿಲಿಯ | 78 | " |
| 6. | ಹೈವರ್ಡ್ಸ್ ವಿಸ್ಕಿ | 180 | ಮಿಲಿಯ | 09 | " |

| | | | | | |
|---|---|---|---|---|---|
| 7. | ಒಲ್ಡ್ ಟಾವರಿನ ವಿಸ್ಕಿ | 375 | | 07 | " |
| 8. | ಡಿಮಾಂಡ್ ಡಿಲಕ್ಸ್ ವಿಸ್ಕಿ | 180 | ಮಿಲಿಯ | 199 | " |
| | | | ಒಟ್ಟು | 535 | ರಟ್ಟಿನ ಪೆಟ್ಟಿಗೆಗಳು |

ಮೇಲ್ಕಂಡ ಪೆಟ್ಟಿಗೆಗಳಿಂದ ಪಿರ್ಯಾದಿದಾರರು ವಿವಿಧ ರೀತಿಯ ಮೇಲ್ಕಂಡ ಮದ್ಯದ ಬಾಟ್ಲಿಗಳಿಂದ ತಲಾ 2 (ಎರಡೆರಡರಂತೆ) ಬೇರ್ಪಡಿಸಿ ಪ್ರತ್ಯೇಕವಾಗಿ ಶೀಲು ಮಾಡಿರುತ್ತಾರೆ. ಪಿರ್ಯಾದಿದಾರರು ಉಪ ತನಿಖಾಧಿಕಾರಿಗಳು ವಿಜಾಪುರ ನಗರ ಉಪವಲಯ ರವರ ಮುಖಾಂತರ ಈ ಪ್ರಾಧಿಕಾರಕ್ಕೆ ಸಲ್ಲಿಸಿದ ದಾಖಲೆಗಳನ್ನು ಅವಲೋಕಿಸಲಾಗಿ ರಸಾಯನಿಕ ತಜ್ಞರು ಬೆಂಗಳೂರು ಇವರು ತಮ್ಮ ವರದಿ ನಂಬರ್:ಸಿಸಿಎಲ್:828:2003, ದಿನಾಂಕ: 10.2.2003 ರಲ್ಲಿ ಸದರಿ ಶ್ಯಾಂಪಲ್ ಬಾಟ್ಲಿಗಳಲ್ಲಿ ಮದ್ಯದ ಅಂಶವಿರುವುದಾಗಿಯೂ ಹಾಗೂ ಅವು ಮಾನವ ಸೇವನೆಗೆ ಯೋಗ್ಯವಿರುವುದಾಗಿ ವರದಿಯಲ್ಲಿ ಸಲ್ಲಿಸಿದ್ದಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯ ತಮ್ಮದೆಂದು ಹೇಳಿಕೊಂಡು ಯಾರು ಬಂದಿರುವುದಿಲ್ಲಾ. ಆದ್ದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ 535 ರಟ್ಟಿನ ಪೆಟ್ಟಿಗೆಗಳ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಹಾಗೂ ಶ್ಯಾಂಪಲ್ ಬಾಟ್ಲಿಗಳನ್ನು ಹೊರತುಪಡಿಸಿ ಉಳಿದ ಮದ್ಯವನ್ನು ಕಾನೂನು ಬದ್ಧವಾಗಿ ವಿಲೇವಾರಿ ಮಾಡಲು ಈ ಪ್ರಾಧಿಕಾರದ ಆದೇಶದ ನಂಬರ್: ಇಎಕ್ಸ್‌ಇ: ಬಿಜೆಪಿ:ಡಿಟಿಸಿಆರ್:316:2002-2003, ದಿನಾಂಕ: 4.2.2003 ರಲ್ಲಿ ಅಬಕಾರಿ ಇನ್ಸ್‌ಪೆಕ್ಟರ್ ವಿಜಾಪುರ ವಲಯ ಇವರಿಗೆ ಆದೇಶಿಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಳಗಾಂವ ಜಿಲ್ಲೆ ಬೆಳಗಾಂವ ಇವರಿಗೆ ಪತ್ರ ಬರೆದು ವಾಹನದ ಬಿ-ಎಕ್ಸ್‌ಟ್ರ್ಯಾಕ್ಟ್ ಕಳಿಸಿ ಕೊಡಲು ಈ ಪ್ರಾಧಿಕಾರದಿಂದ ಕೇಳಲಾಗಿತ್ತು. ಈ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿ-ಎಕ್ಸ್ಟ್ರ್ಯಾಕ್ಟ್ ಈ ಕಛೇರಿಗೆ ಸಲ್ಲಿಸಿ ಶ್ರೀ ಲಿಯೊ ಜೋಶೆಫ್ ಅರ್ಯನ್, ನಂ: 365, 1:ಎ, ಪಿ.ಬಿ. ರಸ್ತೆ ಬೆಳಗಾಂವ ಇವರು ವಾಹನದ ಮಾಲೀಕರು ಇರುತ್ತಾರೆ. ಮತ್ತು ವಾಹನವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು ಪಶ್ಚಿಮಕ್ಕೆ ವರ್ಗಾಯಿಸಲಾಗಿದೆ ಎಂದು ತಿಳಿಸಿರುತ್ತಾರೆ. ಇದರ ಪ್ರಕಾರ ವಾಹನದ ಮಾಲೀಕರಾದ ಶ್ರೀ ಲಿಯೋ ಜೋಶೆಫ್ ಅರ್ಯನ್, ನಂ. 365:1ಎ, ಪಿ.ಬಿ. ರಸ್ತೆ ಬೆಳಗಾಂವ ಇವರಿಗೆ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ತಯಾರಿಸಿ ನೋಂದಾಯಿತ ಅಂಚೆ ಕಳಿಸಿ ಕೊಡಲಾಯಿತು. ಆದರೆ ಸದರಿಯವರು ಆ ಸ್ಥಳದಲ್ಲಿ ವಾಸವಾಗಿರುವುದಿಲ್ಲಾ ಎಂಬುವುದು ತಿಳಿದು ಬಂದಿತು. ನಂತರ ಸದರಿ ವಾಹನದ ಬಿ-ಎಕ್ಸ್‌ಟ್ರ್ಯಾಕ್ಟನ್ನು ಕಳಿಸಿ ಕೊಡಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು ಪಶ್ಚಿಮಕ್ಕೆ ಇವರಿಗೆ ಪತ್ರ ಬರೆದು ತಿಳಿಸಲಾಯಿತು. ಆದರೆ ಸದರಿ ವಾಹನವು ತಮ್ಮ ಕಛೇರಿಯಲ್ಲಿ ದಾಖಲಾಗಿರುವುದಿಲ್ಲಾ ಅಂತಾ ದಿನಾಂಕ: 26.10.2004 ರಂದು ಪತ್ರ ಬರೆದು ತಿಳಿಸಿರುತ್ತಾರೆ.

ಈ ಪ್ರಾಧಿಕೃತ ನ್ಯಾಯಾಲಯದಿಂದ ಯಾರಿಗೆ ಸಂಬಂಧಿಸಿದೆಯೋ ಅಂಥಹವರಿಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಗುರುವಾರ ಜನವರಿ 8, 2004 ರಂದು ಭಾಗ-3 ಪುಟಸಂಖ್ಯೆ ನಂ:59 ಇದರಲ್ಲಿ ಪ್ರಕಟಿಸಲಾಯಿತು. ವಾಹನದ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸಂಬಂಧಿಸಿದ ದಾಖಲೆಗಳನ್ನು ರಾಜ್ಯ ಸರ್ಕಾರದ ಪತ್ರಾಂಕಿತ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ 15 ದಿನಗಳ ಒಳಗೆ ನಿರೂಪಿಸತಕ್ಕದ್ದು ಎಂದು ಪ್ರಕಟಣೆಯಲ್ಲಿ ತಿಳಿಸಲಾಗಿತ್ತು. ಹಾಗೊಂದು ವೇಳೆ ನಿಗದಿತ ಅವಧಿಯ ಒಳಗೆ ಯಾರೆ ಆಗಲಿ ಮುಂದೆ ಬಂದು ತಮ್ಮ ಹಕ್ಕನ್ನು ಜಪ್ತು ಮಾಡಿದ ಮುದ್ದೇಮಾಲು ಮತ್ತು ವಾಹನದ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನವನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಮತ್ತು 43 (ಸಿ) ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಕೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲಾ ಅಂತಾ ಪ್ರಕಟಿಸಲಾಯಿತು. ಈ ಪ್ರಕರಣ ದಾಖಲಾಗಿ ಈಗಾಗಲೇ ಒಂದು ವರ್ಷ ಕಳೆದರು ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರು ಇಂದಿನವರೆಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲಾ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸಾಧಿಸದೇ ಇರುವುದರಿಂದಾ ಸದರಿಯವರನ್ನು ಎಕ್ಸ್-ಪಾರ್ಟಿ (ಏಕಪಕ್ಷೀಯವಾಗಿ) ಅಂತಾ ಪರಿಗಣಿಸಲಾಯಿತು.

ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವ ಕುರಿತು ಮುಂದಿನ ವಿಚಾರಣೆಯನ್ನು ಕೈಗೊಂಡಿದ್ದು ಇರುತ್ತದೆ.

ಅಭಿಯೋಜನೆಯ ಪರವಾಗಿ ಇಬ್ಬರು ಸಾಕ್ಷಿದಾರರನ್ನು ಪಿ.ಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ರಂತೆ ವಿಚಾರಣೆ ಮಾಡಿ ಐದು ದಾಖಲೆಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರ್ತಿಸಿಕೊಂಡಿದ್ದು ಇರುತ್ತದೆ. ಪಿಡಬ್ಲ್ಯೂ-1 ರವರು ತಾವು ದಿನಾಂಕ: 27.1.2003 ರಂದು ಭಾತ್ಮಿ ಬಂದ ಮೇರೆಗೆ ಬಸವನಗರಕ್ಕೆ ಪಂಚರನ್ನು ಹಾಗೂ ಸಿಬ್ಬಂದಿಯೊಂದಿಗೆ ಹೋಗಿ ಅಲ್ಲಿ ನಿಂತು ವಾಚ್ ಮಾಡಲಾಗಿ ಒಂದು ಟ್ರಕ್‌ದಿಂದಾ ಕೆಲವು ಜನರು ಮದ್ಯದ ಬಾಟ್ಲಿವುಳ್ಳ ಬಾಕ್ಸ್‌ಗಳನ್ನು ಇಳಿಸುವುದನ್ನು ಕಂಡು ಬಂದಿತ್ತು. ಹಾಗೂ ಪಿ.ಡಬ್ಲ್ಯೂ-1 ಮತ್ತು ಅವರ ಜೊತೆಯಲ್ಲಿ ಇದ್ದ ಸಿಬ್ಬಂದಿಯವರು ಗೇರಾವು ಹಾಕಿ ಹಿಡಿಯಲು ಪ್ರಯತ್ನಪಟ್ಟಾಗ ಮದ್ಯದ ಬಾಟ್ಲಿಗಳ ಬಾಕ್ಸ್ ಇಳಿಸುವ ಜನರು ಓಡಿ ಹೋದರೆಂದು ತಮ್ಮ ಸಾಕ್ಷಿ ನುಡಿದಿರುತ್ತಾರೆ. ನಂತರ ಅವರು ಅಲ್ಲಿ ಸ್ಥಳೀಯ ಜನರನ್ನು ವಿಚಾರಣೆ ಮಾಡಿದಾಗ ಓಡಿ ಹೋದ ಜನರ ಹೆಸರು ಕೇಳಲಾಗಿ ಒಬ್ಬ ಜಯರಾಮ ನಿಂಗೇಗೌಡ, ಸಾ: ನೆಲಮಂಗಲ, 2) ನಿಂಗಪ್ಪ ಬಸವರಾಜ ಬಿರಾದಾರ, ಅಂತಾ ಹೇಳಿದರು ಎಂದು ಸಾಕ್ಷಿ ನುಡಿದಿರುತ್ತಾರೆ. ನಂತರ ಪಂಚನಾಮೆ ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಮುಂದುವರಿಯುತ್ತಾ ಲಾರಿ ಹಾಗೂ ಮದ್ಯದ ಬಾಕ್ಸ್‌ಗಳನ್ನು ಜಪ್ತು ಮಾಡಿದರು ಎಂದು ಹಾಗೂ ಪ್ರತಿ ಬ್ರ್ಯಾಂಡದಿಂದಾ ಎರಡು ಬಾಟ್ಲಿಗಳಂತೆ ಶ್ಯಾಂಪಲ್ ಅಂತಾ ಬೇರ್ಪಡಿಸಿ ಶೀಲು ಮಾಡಿದರು ಅಂತಾ ಸಾಕ್ಷಿ ನುಡಿದಿರುತ್ತಾರೆ. ಸಾಕ್ಷ್ಯವನ್ನು ಮುಂದುವರಿಸುತ್ತಾ ಸರ್ಕಾರದ ಪರವಾಗಿ ಪಿರ್ಯಾದಿಯನ್ನು ಗಾಂಧಿಚೌಕ ಪೊಲೀಸ್ ಠಾಣಾ ಗುನ್ನೆ ನಂಬರ್: 29:2003 ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಪ್ರಥಮ ವರ್ತಮಾನದ ವರದಿಯನ್ನು ನಿಶಾನೆ ಪಿ-2 ರಂತೆ ನ್ಯಾಯಾಲಯಕ್ಕೆ ಹಾಗೂ ತಮ್ಮ ಮೇಲಾಧಿಕಾರಿಗಳಿಗೆ ಸಲ್ಲಿಸಿದರು ಅಂತಾ ಸಾಕ್ಷಿ ನುಡಿದಿರುತ್ತಾರೆ. ನಂತರ ತನಿಖೆಯನ್ನು ಮುಂದುವರಿಸಿ ಮತ್ತೊಬ್ಬ ಆರೋಪಿಯಾದ ನಿಂಗಪ್ಪ ಬಸವರಾಜ ಬಿರಾದಾರ, ಎಂಬುವವರನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆಗೊಳಿಸಿರುತ್ತಾರೆ. ನಂತರ ದಿನಾಂಕ: 3.2.2003 ರಂದು ಜಪ್ತಾದ ಮುದ್ದೇಮಾಲು ಹಾಗೂ ಲಾರಿಯನ್ನು ಮತ್ತು ಪ್ರಕರಣದ ಉಳಿದ ಕಾಗದ ಪತ್ರಗಳೊಂದಿಗೆ ಅಬಕಾರಿ ಉಪ ತನಿಖಾಧಿಕಾರಿಗಳು ವಿಜಾಪುರ ನಗರ ಉಪವಲಯ ಇವರಿಗೆ ವರ್ಗಾಯಿಸಿದರೆಂದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿದಾರರ ಸಾಕ್ಷ್ಯವನ್ನು ಅಲ್ಲಗಳೆಯಲು ಲಾರಿಯ ಮಾಲೀಕರು ಹಾಜರ್ ಆಗದೇ ಇದ್ದುದರಿಂದ ಇವರ ಸಾಕ್ಷ್ಯವನ್ನು ನಂಬಲು ಅರ್ಹ ಇರುತ್ತದೆ.

ಪಿ.ಡಬ್ಲ್ಯೂ-2 ಮಲ್ಲಪ್ಪ ಭೀಮಪ್ಪ ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು ವಿಜಾಪುರ ನಗರ ಉಪವಲಯ ರವರು ಈ ಪ್ರಕರಣದಲ್ಲಿ ಮುಂದಿನ ತನಿಖೆಯನ್ನು ದಿನಾಂಕ: 6.2.2003 ರಂದು ಮುಂದುವರಿಸಿ ಜಪ್ತಾದ ಶ್ಯಾಂಪಲ್ ಬಾಟ್ಲಿಗಳನ್ನು ನಿಶಾನೆ ಪಿ-4, ಕವರಿಂಗ್ ಲೆಟರ್ ಅಡಿಯಲ್ಲಿ ರಸಾಯನಿಕ ಪರೀಕ್ಷೆಗೆ ಕಳುಹಿಸಿ ಕೊಟ್ಟರೆಂದು ಮತ್ತು ತಜ್ಞರಿಂದ ವರದಿ ಹಾಗೂ ಶ್ಯಾಂಪಲ್ ಬಾಟ್ಲಿಗಳನ್ನು ದಿನಾಂಕ: 17.2.2003 ರಂದು ವಾಪಸ್ ಪಡೆದರೆಂದು ಹಾಗೂ ಅದರೊಂದಿಗೆ ರಸಾಯನಿಕ ವರದಿ ನಿಶಾನೆ ಪಿ-5 ಕೂಡಾ ಪಡೆದರೆಂದು ಸಾಕ್ಷಿ ನುಡಿದಿರುತ್ತಾರೆ. ಇವರ ಸಾಕ್ಷಿಯನ್ನು ಕೂಡಾ

ಲಾರಿಯ ಮಾಲೀಕರು ಕೂಡಾ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅಲ್ಲಗಳೆದಿರುವುದಿಲ್ಲಾ. ಆ ಕಾರಣ ಇವರ ಸಾಕ್ಷಿ ಕೂಡಾ ನಂಬಲು ಅರ್ಹರು ಇರುತ್ತಾರೆ.

ಈ ಮೇಲೆ ವಿಚಾರಣೆಗೆ ಒಳಪಡಿಸಿರುವ ಪಿರ್ಯಾದಿದಾರರ ಮತ್ತು ಅಬಕಾರಿ ಉಪ ತನಿಖಾಧಿಕಾರಿಗಳ ಪ್ರಕರಣ ವಿಚಾರದಲ್ಲಿ ಪೂರಕವಾಗಿ ಸಾಕ್ಷಿ ನೀಡಿದ್ದು ಈ ಕಾರಣದಿಂದ ಜಪ್ತುಗೊಳಿಸಿದ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದು ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲ ಅಂಶಗಳನ್ನು ಪರಿಶೀಲಿಸಲಾಗಿ ವಾಹನದಲ್ಲಿ ಅಕ್ರಮ ಮದ್ಯವು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು, ಅದು ಬಿಸಿಲು, ಮಳೆ ಮುಂತಾದ ಹವಾಮಾನದ ವೈಪರೀತ್ಯದಿಂದ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದಾ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶದ ನಂಬರ್: ಇಎಕ್ಸ್‌ಇ: ಬಿಜೆಪಿ:ಡಿಟಿಸಿಆರ್:316:2002-03, ದಿನಾಂಕ: 22ನೇ ಜನವರಿ 2005**

ಕೆ. ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ವಿಜಾಪುರ ಜಿಲ್ಲೆ ವಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43 (ಬಿ) ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಲಾರಿ ವಾಹನ ನಂಬರ್: ಕೆಎ:22:969 ಲಾರಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 22.01.2005 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುತ್ತದೆ.

**ಕೆ. ಆರ್. ಗೌಡ್ರ**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್ ವಿಜಾಪುರ ಜಿಲ್ಲೆ ವಿಜಾಪುರ (ಪ್ರಭಾರ).

**ಅನುಬಂಧ-1**

**ಪಿರ್ಯಾದಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | |
|---|---|---|
| ಪಿ.ಡಬ್ಲ್ಯೂ-1- | ಶ್ರೀ ಎಸ್. ಬಿ. ಕೆಂಗಲಗುತ್ತಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಗುಳೇದಗುಡ್ಡ ಪೊಲೀಸ್ ಠಾಣೆ | - ತನಿಖಾಧಿಕಾರಿ |
| ಪಿ.ಡಬ್ಲ್ಯೂ-2- | ಶ್ರೀ ಮಲ್ಲಪ್ಪ ಭೀಮಪ್ಪ ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು ವಿಜಾಪುರ ನಗರ ಉಪವಲಯ | - ತನಿಖಾಧಿಕಾರಿ |

**ಅನುಬಂಧ-2**

**ಪಿರ್ಯಾದಿದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ-ಪಿ-1- | ಪಂಚನಾಮೆಯ (ದೃಢೀಕೃತ ಪತ್ರ) |
| ನಿಶಾನೆ-ಪಿ-1-(ಎ) | ಪಿ.ಡಬ್ಲ್ಯೂ-1 ರವರ ಸಹಿ (ಪಿರ್ಯಾದಿದಾರರ ಸಹಿ) |
| ನಿಶಾನೆ-ಪಿ-2- | ಪಿರ್ಯಾದಿ |
| ನಿಶಾನೆ-ಪಿ-2-(ಎ) | ಪಿರ್ಯಾದಿದಾರರ ಸಹಿ |
| ನಿಶಾನೆ-ಪಿ-3- | ಪ್ರಥಮ ವರ್ತಮಾನ ವರದಿ |
| ನಿಶಾನೆ-ಪಿ-4- | ಶ್ಯಾಂಪಲ್ ಬಾಟ್ಲಿಗಳು ಒಟ್ಟು 16 ರಸಾಯನಿಕ ಪರೀಕ್ಷೆಗೆ ಕಳುಹಿಸಿ ಕೊಟ್ಟ ಕವರಿಂಗ್ ಲೆಟರ್ ಪ್ರತಿ |
| ನಿಶಾನೆ-ಪಿ-4(ಎ) | ಪಿಡಬ್ಲ್ಯೂ.-2 ರವರ ಸಹಿ |
| ನಿಶಾನೆ-ಪಿ-5- | ರಸಾಯನಿಕ ತಜ್ಞರ ವರದಿ ನಕಲು. |

**ಗುರುತಿಸಿದ ಮುದ್ದೇಮಾಲು**

| | |
|---|---|
| 1) ಎಂ.ಓ.-1- | ಲಾರಿ ನಂಬರ್: ಕೆಎ:22:969 |
| 2) ಎಂ.ಓ.-2- | ಶ್ಯಾಂಪಲ್ ಬಾಟ್ಲಿಗಳು |

**ಅನುಬಂಧ-3**

**ವಾಹನದ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಇಲ್ಲಾ

**ಅನುಬಂಧ-4**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ

**ಕೆ. ಆರ್. ಗೌಡ್ರ**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್ ವಿಜಾಪುರ ಜಿಲ್ಲೆ ವಿಜಾಪುರ (ಪ್ರಭಾರ).

ಪಿ.ಆರ್.187

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ನ್ಯಾಯಾಲಯ

**ತಿದ್ದುಪಡಿ ನಂ. ಬಿ2:71:(ಎ):ಕ್ರೈಂ.ನಂ.9:99/99-00 ದಿನಾಂಕ: 5ನೇ ಜನವರಿ 2005**

ಕರ್ನಾಟಕ ರಾಜ್ಯಪತ್ರ ಗುರುವಾರ ಡಿಸೆಂಬರ್ 09, 2004 ರ ಭಾಗ-3 ಪುಟ ಸಂಖ್ಯೆ: 2138 ರಿಂದ 2140 ರವರೆಗೆ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನದ ಸಂಖ್ಯೆ: ಪಿವೈ-01/ಹೆಚ್-6442 ಎಂದು ಪ್ರಕಟವಾಗಿದ್ದು ದಯಮಾಡಿ ಇದನ್ನು ಪಿ.ವೈ-01/ಹೆಚ್-6642 (PY-01/H-6642) ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳಬೇಕಾಗಿ ಕೋರಲಾಗಿದೆ.

**ಬಿ. ಗೋಪಾಲನಾಯ್ಕ**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್.189

## 1ನೇ ಹೆಚ್ಚುವರಿ ದಿವಾಣಿ ನ್ಯಾಯಾಧೀಶರು (ಕಿ.ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳವರ 1ನೇ ನ್ಯಾಯಾಲಯ, ಬಿಜಾಪುರ

### ಸಾರ್ವಜನಿಕ ಪ್ರಕಟಣೆ

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಕಾಣಿಸಿದ ಮುದ್ದೇಮಾಲುಗಳಿಗೆ ಯಾವುದೇ ವಾರಸುದಾರರಾಗಲೀ ಹಕ್ಕುದಾರರಾಗಲೀ ಇಲ್ಲಿಯವರೆಗೆ ತಮ್ಮದೆಂದು ಗುರುತಿಸಿ ಸದರೀ ಮುದ್ದೇಮಾಲುಗಳು ತಮಗೆ ಬೇಕೆಂದು ಪ್ರಯತ್ನ ಮಾಡಿರುವುದಿಲ್ಲ.

ಕಾರಣ, ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ ಆರು (6) ತಿಂಗಳ ಒಳಗಾಗಿ ಕೆಳಗೆ ಕಾಣಿಸಿದ ಮುದ್ದೇಮಾಲುಗಳ ಬಗ್ಗೆ ತಮ್ಮ ವಾರಸುದಾರಿಕೆಯಾಗಲೀ ಅಥವಾ ಹಕ್ಕುದಾರಿಕೆಯಾಗಲೀ ಇದ್ದಲ್ಲಿ ತಮ್ಮದೆಂದು ಖಚಿತಪಡಿಸಿಕೊಳ್ಳಲು ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿ ಒಯ್ಯಬಹುದು. ಇದಕ್ಕೆ ತಪ್ಪಿದಲ್ಲಿ ಸದರೀ ಮುದ್ದೇಮಾಲುಗಳಿಗೆ ವಾರಸುದಾರರಾಗಲೀ ಅಥವಾ ಹಕ್ಕುದಾರರಾಗಲೀ ಯಾರು ಇರುವುದಿಲ್ಲವೆಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಅ.ನಂ. | ಪ್ರಕರಣದ ನಂಬರ್ | ಸಿ.ಆರ್. ನಂಬರ್ | ಪ್ರಕರಣವು ನಿಕಾಲೆಯಾದ ದಿನಾಂಕ | ಸ್ವತ್ತಿನ ವಿವರ |
|---|---|---|---|---|
| - | - | - | - | ಸೈಕಲ್‌ಗಳು 12 ಚಾಲೂ ಸ್ಥಿತಿಯಲ್ಲಿ ಇಲ್ಲದವು ಮುದುಡಿಯಾಗಿದ್ದವುಗಳು ಇರುತ್ತದೆ. |

**ಬಸವರಾಜ ಚೀಂಗಟಿ**
ಪಿ.ಆರ್.221 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು
(ಕಿ.ವಿ) ಮತ್ತು ಜೆ.ಎಂ.ಎಫ್‌ಸಿ. 1ನೇ ನ್ಯಾಯಾಲಯ, ಬಿಜಾಪುರ.

## ಜಿಲ್ಲಾ ಖಜಾನಾಧಿಕಾರಿಯವರ ಕಛೇರಿ, ದ.ಕ. ಮಂಗಳೂರು

### ಪ್ರಕಟಣೆ ಸಂಖ್ಯೆ: ಜಿಖ: ಆಡಳಿತ:43:2004-05 ದಿನಾಂಕ: 17ನೇ ಜನವರಿ 2005

**ವಿಷಯ :** ಬ್ಯಾಂಕೇತರ ಉಪಖಜಾನೆ ಬಂಟ್ವಾಳ ಬ್ಯಾಂಕಿಂಗ್ ಉಪ ಖಜಾನೆಯನ್ನಾಗಿ ಪರಿವರ್ತಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂ: ಎಫ್‌ಡಿ:92:ಆಖಇ:02 ಬೆಂಗಳೂರು ದಿನಾಂಕ: 11.01.05.
2. ಖಜಾನೆ ನಿರ್ದೇಶಕರು ಬೆಂಗಳೂರು ಇವರ ಪತ್ರ ಸಂ.ಖನಿ:ಪ್ರಕ್ರಿಯ:5:04-05 ದಿನಾಂಕ: 15.01.2005

ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳದ ನಾನ್ ಬ್ಯಾಂಕಿಂಗ್ ಉಪ ಖಜಾನೆಯನ್ನು ಬ್ಯಾಂಕಿಂಗ್ ಉಪ ಖಜಾನೆಯನ್ನಾಗಿ ಪರಿವರ್ತಿಸಿ "ನಿಗದಿತ ದಿನಾಂಕ" ದಂದು ಉಪ ಖಜಾನೆಯ ನಗದು ವಹಿವಾಟನ್ನು ಸ್ಥಳೀಯ ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು ಇಲ್ಲಿಗೆ ವರ್ಗಾಯಿಸಲು ಆದೇಶಿಸಿದೆ.

ಉಲ್ಲೇಖ (2)ರಲ್ಲಿ ಖಜಾನೆ ನಿರ್ದೇಶಕರು ಬೆಂಗಳೂರು ಇವರು ನಿಗದಿತ ದಿನಾಂಕ ಅಂದರೆ ದಿನಾಂಕ: 01.02.2005 ರಂದು ಬಂಟ್ವಾಳ ಉಪ ಖಜಾನೆಯ ನಗದು ವಹಿವಾಟನ್ನು ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇಲ್ಲಿಗೆ ವರ್ಗಾಯಿಸಲು ಕ್ರಮ ಕೈಗೊಳ್ಳುವಂತೆ ನಿರ್ದೇಶನ ನೀಡಿದ್ದಾರೆ. ಆದುದರಿಂದ 01.02.2005 ರಿಂದ ಬಂಟ್ವಾಳ ಉಪ ಖಜಾನೆಯು ಬ್ಯಾಂಕಿಂಗ್ ಖಜಾನೆಯಾಗಿ ಪರಿವರ್ತನೆಗೊಂಡು ಚೆಕ್ಕು ಪದ್ಧತಿಯೊಂದಿಗೆ ಕಾರ್ಯನಿರ್ವಹಿಸುತ್ತದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

ಬಂಟ್ವಾಳ ಉಪ ಖಜಾನೆಯಲ್ಲಿ ಹಣ ಸೆಳೆಯುವ ಅಧಿಕಾರಿಗಳು ಮತ್ತು ಪಿಂಚಣಿದಾರರು ಹಾಗೂ ಎಲ್ಲಾ ಸಾರ್ವಜನಿಕರು ಇನ್ನು ಮುಂದೆ ದಿನಾಂಕ: 01.02.2005 ರಿಂದ ಬಂಟ್ವಾಳ ಉಪ ಖಜಾನೆಯ ಎಲ್ಲಾ ನಗದು ವಹಿವಾಟನ್ನು ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯ ಮುಖಾಂತರ ನಡೆಸಲು ತಿಳಿಸಲಾಗಿದೆ.

ಈ ಹೊಸ ಪದ್ಧತಿಯಲ್ಲಿ ಬಟವಾಡೆ ಅಧಿಕಾರಿಗಳಿಗೆ ಪಿಂಚಣಿದಾರರಿಗೆ ಅವರು ಸಲ್ಲಿಸಿದ ಬಿಲ್ಲುಗಳಿಗೆ ಉಪ ಖಜಾನೆಯಲ್ಲಿ ಚೆಕ್ಕು ನೀಡಲಾಗುವುದು, ಚೆಕ್ಕನ್ನು ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇಲ್ಲಿ ನಗದು ಮಾಡಿಸಿಕೊಳ್ಳುವುದು. ಸರ್ಕಾರಕ್ಕೆ ಜಮೆ ಮಾಡಬೇಕಾದ ಹಣವನ್ನು ನಿಗದಿತ ಚಲನಿನ ನಮೂನೆಯಲ್ಲಿ ಭರ್ತಿ ಮಾಡಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬಂಟ್ವಾಳದಲ್ಲಿ ಜಮೆ ಮಾಡತಕ್ಕದ್ದು. ಚಲನ್‌ಗಳ ಮೇಲೆ 12 ಅಂಕಿಗಳ ಲೆಕ್ಕ ಶೀರ್ಷಿಕೆಯನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು ಹಾಗೂ ಸಂಬಂಧಪಟ್ಟ ಅಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು. ಸರಿಯಾದ ಲೆಕ್ಕ ಶೀರ್ಷಿಕೆ ಕೋಡ್ ಹಾಗೂ ಮೇಲು ಸಹಿಯಿಲ್ಲದ ಚಲನುಗಳನ್ನು ಬ್ಯಾಂಕಿನಲ್ಲಿ ಮಾನ್ಯ ಮಾಡಲಾಗುವುದಿಲ್ಲ.

ವಿಷಯದ ಕುರಿತು ಯಾವುದೇ ಅಡಚಣೆಗಳು ಯಾ ಹೆಚ್ಚಿನ ವಿವರಗಳಿಗೆ ಸ್ಥಳೀಯವಾಗಿ ಪತ್ರಾಂಕಿತ ಉಪ ಖಜಾನೆ ಅಧಿಕಾರಿ ಬಂಟ್ವಾಳ ಇವರ ಫೋನ್ ಸಂಖ್ಯೆ: 232819ರ ಮೂಲಕ ಸಂಪರ್ಕಿಸುವುದು.

**ಎಚ್. ದಿವಾಕರ ಹೆಗ್ಡೆ**
ಪಿ.ಆರ್.222 ಜಿಲ್ಲಾ ಖಜಾನೆ ಅಧಿಕಾರಿ, ದ.ಕ. ಮಂಗಳೂರು.

## ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ

### ನಂ. ಅಬಕಾರಿ:ಸಿಆರ್‌ಎಂ:ಡಿಟಿಸಿಆರ್:124:2001-02 ದಿನಾಂಕ: 31ನೇ ಜನವರಿ 2005

**ಉಪಸ್ಥಿತರು :** ಶ್ರೀ ಎಸ್. ಎಸ್. ವಡಕಣ್ಣವರ, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು :** ಶ್ರೀ ರಮೇಶಕುಮಾರ್ ಎಚ್. ಬಿ. ಪೊಲೀಸ್ ಉಪ ನಿರೀಕ್ಷಕರು, ಅಂಕೋಲಾ ಪೊಲೀಸ್ ಠಾಣೆ
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ).

**ವಿರುದ್ಧ**

**ಅರ್ಜಿದಾರರು :** ಕೃಷ್ಣ ಬೊಮ್ಮಯ್ಯ ನಾಯ್ಕ ಸಾ: ಹನ್ನಟ್ಟಾ, ಅಂಕೋಲಾ.
(ಶ್ರೀ ನಾಗರಾಜ ವಿ. ನಾಯಕ ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ).

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 10.12.2001 ರಂದು ರಾತ್ರಿ ಠಾಣೆಯಲ್ಲಿರುವಾಗ 21.00 ಗಂಟೆಗೆ ಸಿಕ್ಕ ಖಚಿತ ಭಾತ್ಮಿಯ ಮೇರೆಗೆ ಕೂಡಲೇ ಇಬ್ಬರು ಪಂಚರನ್ನು ಬರಮಾಡಿಕೊಂಡು ಠಾಣೆಯ ಸಿಬ್ಬಂದಿಯವರೊಂದಿಗೆ ಖಾಸಗಿ ಜೀಪ್ ಮೇಲೆ ಹೊರಟು ಬೇಳಾ ಬಂದರ ಹಳೆ ಕಸ್ಟಮ್ಸ್ ಆಫೀಸ್ ಹತ್ತಿರ ಹೋಗಿ ವಾಚ್ ಮಾಡುತ್ತಿದ್ದೇವೆಂದೂ 21.30 ಗಂಟೆಗೆ ಬೇಳೆ ಬಂದರ ಬದಿಯಿಂದ ಒಂದು ಗೂಡ್ಸ್ ರಿಕ್ಷಾ ಬಂದಿದ್ದು, ತಾವು ದಾರಿ ದೀಪದ ಬೆಳಕಿಗೆ ಹೋಗಿ ನಿಲ್ಲಿಸಲು ಕೈಸನ್ನೆ ಮಾಡಿದಾಗ, ತಮ್ಮಿಂದ ಸುಮಾರು 25 ಫೂಟ ದೂರದಲ್ಲಿ ರಿಕ್ಷಾವನ್ನು ನಿಲ್ಲಿಸಿ, ಇದರಲ್ಲಿ ಹಿಂಬದಿಗೆ ಕುಳಿತವನು ಮತ್ತು ಚಾಲಕನು ತಮ್ಮನ್ನು ನೋಡಿ, ವಾಪಸ್ಸು ಬೇಳಾ ಬಂದರ ಬದಿಗೆ ಓಡ ಹತ್ತಿದರೆಂದೂ, ಆಗ ತಾವು ಬೆನ್ನಟ್ಟಿ ರಿಕ್ಷಾ ಚಾಲಕನನ್ನು ತಮ್ಮ ಸಿಬ್ಬಂದಿಯವರು ಹಿಡಿದು ತಂದು ದಾರಿಯ ದೀಪದ ಬೆಳಕಿಗೆ ಹೆಸರು, ವಿಳಾಸ ಕೇಳಲು ಆತನು ತನ್ನ ಹೆಸರು ಪ್ರಶಾಂತ ಕೃಷ್ಣಾ ನಾಯ್ಕ, ಪ್ರಾಯ 23 ವರ್ಷ, ಸಾ: ಹನ್ನಟ್ಟಾ, ಹಾಲಿ ಬೊಬ್ರುವಾಡ ಅಂಕೋಲಾ ಅಂತಾ ಹೇಳಿದನೆಂದೂ, ಓಡಿ ಹೋದವನಿಗೆ ಹಿಡಿಯಲು ಬೆನ್ನಟ್ಟಿದರು ಆತನು ಸಿಗಲಿಲ್ಲವೆಂದೂ, ಮತ್ತು ಆತನ ಹೆಸರು, ವಿಳಾಸ ತಿಳಿದು ಬಂದಿಲ್ಲವೆಂದೂ, ಸದ್ರಿಯವನನ್ನು ದಾರಿಯ ದೀಪದಲ್ಲಿ ನಾವು ಗುರುತು ಹಿಡಿದಿದ್ದು, ಆತನನ್ನು ಇನ್ನೊಮ್ಮೆ ಸಿಕ್ಕಲ್ಲಿ ಗುರುತಿಸುತ್ತೇವೆಂದೂ, ಸದ್ರಿ ವಾಹನ ಗೂಡ್ಸ್ ರಿಕ್ಷಾ ನಂ. ಕೆಎ-30/4202 ನೇದು ಇದ್ದು, ಸದರಿ ರಿಕ್ಷಾದ ಹಿಂಬದಿಗೆ ಒಟ್ಟು 6 ಪ್ಲಾಸ್ಟಿಕ್ ಚೀಲದ ಮೂಟೆಗಳು ಇದ್ದವೆಂದೂ, ಅವುಗಳನ್ನು ಬಿಚ್ಚಿ ಪರಿಶೀಲಿಸಿ ನೋಡಲಾಗಿ ಒಂದೊಂದರಲ್ಲಿ 375 ಮಿ.ಲೀ.ನ ರೂಬಿ ಕೋಕೋನಟ್ ಫಾಮ ಫೆನ್ನಿ ಅಂತಾ ಲೇಬಲ್ ಇದ್ದ, ಕೆಲವೊಂದಕ್ಕೆ ಲೇಬಲ್‌ಗಳು ಇರುವುದಿಲ್ಲವೆಂದೂ, ಎಲ್ಲಾ ಬಾಟ್ಲಿಗಳ ಮುಚ್ಚಳದ ಮೇಲೆ ಡೋಲ್‌ರಿಚ್ ಇಂಡಸ್ಟ್ರೀಸ್ ಮಾಶಮ್, ಲೋಲೆಮ್ ಗೋವಾ ಅಂತಾ ಬರೆದಿದ್ದವೆಂದೂ, ಒಂದೊಂದು ಮೂಟೆಯಲ್ಲಿ 48 ಬಾಟ್ಲಿಗಳಂತೆ ಒಟ್ಟು 6 ಮೂಟೆಗಳಲ್ಲಿ 288 ಬಾಟ್ಲಿಗಳು ಇದ್ದವೆಂದೂ, ಇವುಗಳ ಬಗ್ಗೆ ಸದರಿ ರಿಕ್ಷಾ ಚಾಲಕನಲ್ಲಿ ಪಾಸ್ ಯಾ ಪರ್ಮಿಟ್ ಇದ್ದ ಬಗ್ಗೆ ವಿಚಾರಿಸಲು ಇಲ್ಲವಾಗಿ ತಿಳಿಸಿದನೆಂದೂ, ಸದರಿ ಗೂಡ್ಸ್ ರಿಕ್ಷಾ ಮತ್ತು ಸರಾಯಿ ಬಾಟ್ಲಿಗಳನ್ನು ಪುರಾವೆಯ ಕುರಿತು ಅಲಾಹಿದ ಪಂಚನಾಮೆಯಂತೆ ಜಪ್ತು ಮಾಡಲಾಯಿತೆಂದೂ, ಪ್ರತಿಯೊಂದು ಮೂಟೆಯಿಂದ ಎರಡೆರಡು ಬಾಟ್ಲಿಗಳಂತೆ ಒಟ್ಟು 12 ಬಾಟ್ಲಿಗಳನ್ನು ಶ್ಯಾಂಪಲ್ ಸಲುವಾಗಿ ಪ್ರತ್ಯೇಕ ತೆಗೆದು ಪಂಚರೆ ಮತ್ತು ಫಿರ್ಯಾದಿ ಕಡೆಯವರ ಸಹಿಯ ಲೇಬಲನ್ನು ಅಂಟಿಸಿ ಅವುಗಳ ಮುಚ್ಚಳಕ್ಕೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಅಂಕೋಲಾ ರವರ ಮೊಹರಿನಿಂದ ಸೀಲ್ ಮಾಡಲಾಯಿತೆಂದೂ, ನಂತರ ತನ್ನ ಫಿರ್ಯಾದನ್ನು ದಾಖಲಿಸಿ ಅಂಕೋಲಾ ಪೊಲೀಸ್ ಠಾಣೆಯ ಗುನ್ನೆ ಸಂ: 243/2001 ದಿನಾಂಕ: 10.12.2001 ರಂತೆ ಪ್ರ.ಮಾ. ವರದಿ ಪಂಚನಾಮೆ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

2. ದಿನಾಂಕ: 21.12.2001 ರಂದು ಶ್ರೀ ಎಸ್. ಪಿ. ನಾಯಕ, ವಕೀಲರು ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾಗಿರುವ ವಾಹನವು ಕೃಷ್ಣಾ ಬೊಮ್ಮಯ್ಯ ನಾಯ್ಕ, ಸಾ: ಹನ್ನಟ್ಟಾ, ಅಂಕೋಲಾ ಇವರ ಮಾಲೀಕತ್ವದ್ದಾಗಿದ್ದು, ಈ ಪ್ರಕರಣದಲ್ಲಿ ಅರ್ಜಿದಾರನ ವಿರುದ್ಧ ಹೊರಿಸಲಾದ ಆರೋಪವು ಸುಳ್ಳಾಗಿದ್ದು, ಇದನ್ನು ಯಾವುದೇ ಅಪರಾಧದಲ್ಲಿ ಬಳಸಲಾಗಿರುವುದಿಲ್ಲವೆಂದೂ ಸದ್ರಿ ವಾಹನವು ದಿನನಿತ್ಯದ ಕೆಲಸಕ್ಕಾಗಿ ಅರ್ಜಿದಾರರಿಗೆ ಅವಶ್ಯಕವಾಗಿರುವುದರಿಂದ ಅದನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:124:2001-02, ದಿನಾಂಕ: 01.02.2002 ರಂತೆ ಅರ್ಜಿದಾರರಿಂದ ರೂ. 40,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೆಲವು ಷರತ್ತುಗಳನ್ನು ವಿಧಿಸಿ, ಸದರಿ ವಾಹನದ ಮಧ್ಯಂತರ ವಶದ ಬಿಡುಗಡೆಗೆ ಈ ಪ್ರಾಧಿಕಾರದಿಂದ ಆದೇಶಿಸಲಾಗಿರುತ್ತದೆ.

3. ಪ್ರಕರಣದ ತನಿಖಾಧಿಕಾರಿಗಳು ತಮ್ಮ ಪತ್ರ ಸಂಖ್ಯೆ: ಅಬಕಾರಿ/ಪೊಲೀಸ್‌ಗುನ್ನೆ/243/2001-02 ದಿನಾಂಕ: 16.02.2002 ರಂದು ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದರಿ ವರದಿಯನ್ವಯ ಮಾದರಿಯಲ್ಲಿ 25 ಡಿಗ್ರಿ ಸೆಂಟಿಗ್ರೇಡ್‌ಗಳಲ್ಲಿ ಶೇ. 23/ ವಿ.ವಿ. ಯಷ್ಟು ಮದ್ಯಸಾರದ ಅಂಶವು ಪತ್ತೆಯಾಗಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

4. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಬಿ(1)ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 3 ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ ನಿಶಾನೆ ಪಿ.1 ರಿಂದ 3 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಾದ ನಾಗೇಂದ್ರ ಮಹಾಬಳೇಶ್ವರ ನಾಯ್ಕ ಸಾ: ಅವರ್ಸಾ ಅಂಕೋಲಾ ಹಾಗೂ ಪ್ರಕಾಶ ಗಣಪತಿ ನಾಯ್ಕ, ಸಾ: ಬೆಲೆಕೇರಿ ಕ್ರಾಸ್ ಇವರುಗಳು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾನೆ.

5. ಪಿಡಬ್ಲ್ಯೂ-1 ರಿಂದ 3 ನೇಯವರ ಹೇಳಿಕೆಯ ಆಧಾರದ ಮೇಲೆ ಮತ್ತು ಅಭಿಯೋಜನೆ ಪಕ್ಷದವರು ಸಲ್ಲಿಸಿರುವ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ 1 ರಂತೆ ಪಡೆದುಕೊಳ್ಳಲಾಯಿತು.

6 ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ನಾಗರಾಜ ವಿ. ನಾಯಕ ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡುಬಂತು.

**7. ವಿವಾದಾಂಶಗಳು:**

ಅ. ದಿನಾಂಕ: 10.12.2001 ರಂದು ರಾತ್ರಿ 21.30 ಗಂಟೆಯ ಸಮಯಕ್ಕೆ ಬೇಳಾಬಂದರ ಬದಿಯಿಂದ ಆರೋಪಿಯು ತಾನು ಚಲಾಯಿಸಿಕೊಂಡು ಬಂದಂತಹ ಆಟೋ ರಿಕ್ಷಾದಲ್ಲಿ ಅಕ್ರಮವಾಗಿ ಪ್ರತಿಯೊಂದರಲ್ಲಿ 375 ಮಿ.ಲೀ.ನ ಗೋವಾ ಸರಾಯಿಯ ತಲಾ 48 ಬಾಟ್ಲಿಗಳಂತೆ ಒಟ್ಟು 6 ಮೂಟೆಗಳಲ್ಲಿ ಒಟ್ಟು 288 ಬಾಟ್ಲಿಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಫಿರ್ಯಾದಿ ಕಡೆಯವರ ಕೈಗೆ ಸಿಕ್ಕಿಬಿದ್ದಿರುವುದನ್ನು ನಿಸ್ಸಂಶಯವಾಗಿ ರುಜುವಾತುಪಡಿಸಿರುತ್ತಾರೆಯೇ?

ಬ. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಗೋವಾ

ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

ಕ. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ನನ್ನ ಉತ್ತರಗಳು ಈ ಕೆಳಕಂಡ ಕಾರಣಗಳಿಗಾಗಿ ಈ ಕೆಳಗಿನಂತಿವೆ**

8. ಅಂಶ 1 :- ಸಕಾರಾತ್ಮಕವಾಗಿ

ಅಂಶ 2 :- ನಕಾರಾತ್ಮಕವಾಗಿ

ಅಂಶ 3 :- ಸಕಾರಾತ್ಮಕವಾಗಿ

**ಕಾರಣಗಳು**

9. ದಿನಾಂಕ: 3.10.2002 ರಂದು ಈ ಪ್ರಕರಣದ ಪಂಚ ಸಾಕ್ಷಿ ನಂ. 1ನೇಯವರಾದ ಪ್ರಕಾಶ ಗಣಪತಿ ನಾಯ್ಕ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ. ಆನಂತರ ಪಾಟೀಸವಾಲಿನಲ್ಲಿಯೂ ಸಹ ಈ ಸಾಕ್ಷಿದಾರರ ಬಾಯಿಯಿಂದ ಅಭಿಯೋಜನೆಗೆ ಸಹಾಯಕವಾಗಬಲ್ಲ ಯಾವುದೇ ನುಡಿಗಳು ಹೊರಬಂದಿರುವುದಿಲ್ಲ ಅದೇ ರೀತಿ ದಿನಾಂಕ: 19.12.2002 ರಂದು ಈ ಪ್ರಕರಣದ ಪಂಚಸಾಕ್ಷಿ ನಂ. 2ನೇಯವರಾದ ನಾಗೇಂದ್ರ ಮಹಾಬಳೇಶ್ವರ ನಾಯ್ಕ ಇವರೂ ಸಹ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ. ಆದರೆ ಪಂಚನಾಮೆಯಲ್ಲಿನ ಸಹಿಯನ್ನು ತನ್ನದೇ ಎಂದು ಒಪ್ಪಿಕೊಂಡಿರುತ್ತಾರೆ. ಆ ನಂತರ ಇವರೂ ಸಹ ಪಾಟೀ ಸವಾಲಿನಲ್ಲಿ ಅಭಿಯೋಜನೆಗೆ ಸಹಕಾರಿಯಾಗಬಲ್ಲ ಯಾವುದೇ ಸಾಕ್ಷ್ಯವನ್ನು ನುಡಿದಿಲ್ಲ. ಆದರೆ ಇವರಿಬ್ಬರೂ ಕನ್ನಡ ಭಾಷೆಯಲ್ಲಿ ತಮ್ಮ ಹೇಳಿಕೆಗಳಿಗೆ ಸಹಿ ಮಾಡಿದ್ದನ್ನು ಗಮನಿಸಿದಾಗ ಕನ್ನಡ ಭಾಷೆಯಲ್ಲಿ ತಯಾರಿಸಲಾದ ಪಂಚನಾಮೆಯು ಸುಳ್ಳಾಗದೇ ಅದಕ್ಕೆ ಏಕೆ ಸಹಿ ಮಾಡಿದರು ಎಂಬುದನ್ನು ವಿವರಿಸಿಲ್ಲ. ಅಲ್ಲದೇ ಪಾಟೀಸವಾಲಿನಲ್ಲಿ ನುಡಿದಂತೆ ಪೊಲೀಸರ ಭಯದಿಂದ ಸಹಿ ಮಾಡಿದ್ದಲ್ಲಿ ಯಾವ ರೀತಿಯ ಭಯವನ್ನು ಪೊಲೀಸರು ತನಗೆ ಉಂಟುಮಾಡಿದ್ದರು ಮತ್ತು ಈ ರೀತಿ ಭಯ ಒಡ್ಡಿದ್ದಕ್ಕಾಗಿ ಅವರ ಮೇಲಾಧಿಕಾರಿಗಳ ಬಳಿಗೆ ಏಕೆ ತಿಳಿಸಲಿಲ್ಲ ಎಂಬುದರ ಬಗ್ಗೆ ವಿವರಿಸಿಲ್ಲವಾದುದರಿಂದ ಈ ಇಬ್ಬರೂ ಸಾಕ್ಷಿದಾರರುಗಳ ಸಾಕ್ಷ್ಯವನ್ನು ನಂಬಲು ಅರ್ಹವಲ್ಲದಂತಾಗಿದೆ.

10. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ರಮೇಶಕುಮಾರ ಎಚ್.ಬಿ., ಪೊಲೀಸ್ ಉಪ ನಿರೀಕ್ಷಕರು, ದಿನಾಂಕ: 10.07.2003 ರಂದು ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ತಯಾರಿಸಲಾದಂತಹ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾ, ಜಪ್ತಿಯಾದ ಮುದ್ದೆಮಾಲುಗಳನ್ನು ಪ್ರಾಧಿಕಾರಕ್ಕೆ ಮುಂದಿನ ನಡಾವಳಿಕೆಗೆ ಒಪ್ಪಿಸಲಾಯಿತೆಂದೂ, ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಲಾಯಿತೆಂದೂ, ನಂತರ ಸಿಕ್ಕ ಇನ್ನೊಬ್ಬ ಆರೋಪಿಯನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಒಪ್ಪಿಸಲಾಯಿತೆಂದೂ ನುಡಿದಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ ಈ ಪ್ರಕರಣದಲ್ಲಿ ಫಿರ್ಯಾದಿ ಮತ್ತು ತನಿಖಾಧಿಕಾರಿ ತಾನೇ ಇರುತ್ತೇನೆಂದೂ, ವಾಹನವನ್ನು ಶೋಧಿಸಲು ಸರ್ಚ್‌ವಾರೆಂಟ್ ತೆಗೆದುಕೊಂಡಿರುವುದಿಲ್ಲವೆಂದು ನುಡಿದಿದ್ದು ಈ ಪ್ರಕರಣಕ್ಕೆ ಅದರ ಅವಶ್ಯಕತೆ ಇರುವುದಿಲ್ಲವೆಂದು ನುಡಿದಿರುತ್ತಾರೆ. ಈ ಬಗ್ಗೆ ಸದರಿ ಸಾಕ್ಷಿದಾರರ ಹೇಳಿಕೆಯನ್ನು ಸಮರ್ಥಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರೆಂಟ್ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ.ಅ. ಕಾಯ್ದೆ 1965ರ ಕಲಂ 54 ರಂತೆ ಅಧಿಕಾರವಿರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ.ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

" In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when Illicit transport of excisable goods more often than not takes place at odd hours of the day and night to avoid detection. Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underiying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused", ಎಂದು ತೀರ್ಪಾಗಿದೆ. ಜಪ್ತಾದ ಎಲ್ಲಾ ಬಾಟ್ಲಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳಿಸಲು ತೊಂದರೆ ಇದ್ದಿಲ್ಲವೆಂದು ತಿಳಿಸಿದ್ದು, ಈ ಪ್ರಕರಣದಲ್ಲಿ ಜಪ್ತಿಯಾದ ಸರಾಯಿಯು ಗೋವಾ ಸರಾಯಿಯಾಗಿದ್ದು ಕರ್ನಾಟಕ ಅಬಕಾರಿ (ಸಾಗಣೆ) ನಿಯಮಗಳು 1985ರ ನಿಯಮ 4ರ ಪ್ರಕಾರ ಹೊರ ರಾಜ್ಯದ ಮದ್ಯವನ್ನು 700 ಮಿ.ಮೀ. ಗಿಂತ ಹೆಚ್ಚಿನ ಪ್ರಮಾಣದಲ್ಲಿ ಕರ್ನಾಟಕ ರಾಜ್ಯದ ಮೂಲಕ ಸಾಗಿಸಬೇಕಾದಲ್ಲಿ ಆಮದು, ರಫ್ತು ಹಾಗೂ ಸಾಗಣೆ ಪತ್ರಗಳ ಅವಶ್ಯಕತೆ ಇರುತ್ತದೆ. ಈ ಪ್ರಕರಣದಲ್ಲಿ ಒಟ್ಟು 12 ಸೀಸೆಗಳನ್ನು ಮಾದರಿಗೆ ತೆಗೆಯಲಾಗಿದ್ದು ಇವುಗಳ ಪ್ರಮಾಣವು ಒಟ್ಟು 4500 ಮಿ. ಲೀಟರ್‌ನಷ್ಟು ಇರುತ್ತದೆ. ಹೀಗಾಗಿ ಎಲ್ಲಾ ಸೀಸೆಗಳನ್ನು ಮಾದರಿಗೆ ತೆಗೆಯುವ ಪ್ರಶ್ನೆ ಉದ್ಭವಿಸುವುದಿಲ್ಲ. ಗುನ್ಹಾ ಸ್ಥಳದಲ್ಲಿ ಅಂದರೆ ಪಂಚನಾಮೆ ಮಾಡುವ ಸ್ಥಳದಲ್ಲಿ ಪಂಚ ಜನರು ಹಾಗೂ ಸಿಬ್ಬಂದಿ ಅವರನ್ನು ಬಿಟ್ಟು ಬೇರೆ ಯಾರೂ ಇರಲಿಲ್ಲವೆಂದು ನುಡಿದಿರುತ್ತಾರೆ. ಹೀಗಾಗಿ ಸ್ಥಳೀಯ ಪಂಚರನ್ನು ಪಡೆದುಕೊಳ್ಳದೇ ತಾನು ಒಯ್ದಂತಹ ಪಂಚರನ್ನು ಪಂಚನಾಮೆಗೆ ಬಳಸಿಕೊಂಡಿರುವ ಕ್ರಮ ಸಮರ್ಥನೀಯವಾಗಿದೆ. ಹೀಗಾಗಿ ಪಿ.ಡಬ್ಲ್ಯೂ-3 ನೇಯವರ ಹೇಳಿಕೆಯ ಆಧಾರದ ಮೇಲೆ ಘಟನೆ ಸಂಭವಿಸಿರುವುದನ್ನು ಅಭಿಯೋಜನೆ

ಪಕ್ಷದವರು ಪ್ರಾಧಿಕಾರದಲ್ಲಿ ನಿಸ್ಸಂಶಯವಾಗಿ ಸಾಬೀತುಪಡಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ 1ನೇಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

11. ದಿನಾಂಕ: 27.07.2004 ರಂದು ಅರ್ಜಿದಾರರಾದ ಕೃಷ್ಣಾ ಬೊಮ್ಮಯ್ಯ ನಾಯ್ಕ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ, ಗೂಡ್ಸ್ ರಿಕ್ಷಾ ನಂ. ಕೆಎ-30/4202 ನೇದರ ಮಾಲೀಕನು ತಾನೇ ಆಗಿರುತ್ತೇನೆಂದೂ, ಈ ರಿಕ್ಷಾದಲ್ಲಿ ತಾನು ಯಾವತ್ತೂ ಕಳ್ಳಸರಾಯಿ ಅಥವಾ ಅನಧಿಕೃತ ಮಾಲನ್ನು ಸಾಗಿಸಿದ್ದು ಇರುವುದಿಲ್ಲವೆಂದೂ, ಅಥವಾ ಬೇರೆಯವರ ಮುಖಾಂತರ ಸಹ ಅನಧಿಕೃತ ವಸ್ತುಗಳನ್ನು ಸಾಗಿಸಿದ್ದು ಇರುವುದಿಲ್ಲವೆಂದು ನುಡಿದಿರುತ್ತಾರೆ. ಆದರೆ ಈ ಪ್ರಕರಣದಲ್ಲಿ ಆರೋಪಿಯಾದಂತಹ ಪ್ರಶಾಂತ ಕೃಷ್ಣಾ ನಾಯ್ಕ, ಈತನನ್ನು ದಸ್ತಗಿರಿ ಮಾಡಿ ಆತನಿಂದ ಆಟೋ ರಿಕ್ಷಾ ಹಾಗೂ ಅಕ್ರಮ ಸರಾಯಿಯನ್ನು ವಶಪಡಿಸಿಕೊಳ್ಳಲಾಗಿದೆ. ಹೀಗಾಗಿ ವಾಹನವನ್ನು ಅದರ ಮಾಲೀಕರು ಬೇರೆಯವರ ಮುಖಾಂತರ ಅನಧಿಕೃತ ವಸ್ತುಗಳ ಸಾಗಾಣಿಕೆಗಾಗಿ ಬಳಸಿಲ್ಲ ಎಂಬುದನ್ನು ಒಪ್ಪಿಕೊಳ್ಳಲು ಬರುವುದಿಲ್ಲ. ಈ ರಿಕ್ಷಾದಲ್ಲಿ ಅಕ್ರಮ ಚಟುವಟಿಕೆಗಳನ್ನು ಮಾಡದಿದ್ದುದಕ್ಕಾಗಿ ಸಾಕಷ್ಟು ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಂಡಿದ್ದೇನೆಂದು ತಿಳಿಸಿದ್ದಾರೆ. ಆದರೆ ಈ ಬಗ್ಗೆ ಯಾವುದೇ ದಾಖಲೆಯನ್ನು ಸಲ್ಲಿಸಿಲ್ಲ, ಸದರಿ ರಿಕ್ಷಾದ ಡ್ರೈವರನ ಮೇಲಿರುವ ಕ್ರಿಮಿನಲ್ ಪ್ರಕರಣ ಮಾನ್ಯ ಜೆ. ಎಂ.ಎಫ್.ಸಿ. ನ್ಯಾಯಾಲಯದಲ್ಲಿ ನಿರ್ದೋಷಿ ಎಂದು ತೀರ್ಮಾನವಾಗಿರುತ್ತದೆಂದು ತಿಳಿಸಿರುತ್ತಾರೆ. ಆದರೆ ಅಬಕಾರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿಗಳನ್ನು ಅಭಿಯೋಜನೆಗೆ ಒಳಪಡಿಸಿರಲಿ ಅಥವಾ ಇಲ್ಲದಿರಲಿ ಅಂತಹ ಪ್ರಕರಣದಲ್ಲಿ ಒಳಗೊಂಡಂತಹ ಸ್ವತ್ತುಗಳನ್ನು ಕ.ಅ.ಕಾಯ್ದೆ 1965ರ ಕಲಂ 43.ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದಿದೆ. ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್.ವಿಜಯ ಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎಆರ್.1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ.

"The Contention of the owner of the seized vehicle that non-filling of a criminal case or acquittal of the accused involved in illegal transport of forest produce takes away the jurisdiction of the Authorised Officers to initiate confiscation proceeding under section 71A, hence confirmed the order of confiscation."
ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಅಬಕಾರಿ ಕಾಯ್ದೆ ಇವೆರಡೂ ಕಾಯ್ದೆಗಳಡಿಯಲ್ಲಿ ಮುಟ್ಟುಗೋಲಿನ ಬಗ್ಗೆ ರಚಿಸಲಾದ ನಿಯಮಗಳು ಒಂದೇ ರೀತಿಯವಾಗಿರುವುದರಿಂದ ಈ ಪ್ರಕರಣದಲ್ಲಿ ಸದರಿ ತೀರ್ಪನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಕಾರಣದಿಂದಾಗಿ ವಾಹನದ ಮಾಲೀಕನು ತಾನು ಶಾಮೀಲಾಗದೇ ಮತ್ತು ತನ್ನ ಗಮನಕ್ಕೆ ಬಾರದೇ ಈ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ತೃಪ್ತಿಕರವಾಗಿ ರುಜುವಾತುಪಡಿಸಲು ವಿಫಲರಾಗಿರುವುದು ಕಂಡುಬರುತ್ತದೆ.

12. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 62/2001 ದಿನಾಂಕ: 15.07.2004 ಕ್ರಿಮಿನಲ್ ಅಪೀಲ್ ಸಂಖ್ಯೆ: 181/2001 ದಿನಾಂಕ: 05.10.2004 ಮತ್ತು ಕ್ರಿಮಿನಲ್ ಅಪೀಲ್ ಸಂಖ್ಯೆ: 2/2002 ದಿನಾಂಕ: 14.12.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಂಕೋಲಾ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 243/2001 ದಿನಾಂಕ: 10.12.2001 ರಲ್ಲಿ ಜಪ್ತಿಯಾದಂತಹ ಒಂದು ಆಟೋ ರಿಕ್ಷಾ ಸಂಖ್ಯೆ: ಕೆಎ-30/4202 ನೇದನ್ನು ಹಾಗೂ ಪ್ರತಿಯೊಂದು ಮೂಟೆಯಲ್ಲಿ ತಲಾ 48 ಬಾಟ್ಲಿಗಳಂತಿರುವ 375 ಮಿ.ಲೀ.ನ ಗೋವಾ ಸರಾಯಿ ಒಟ್ಟು 6 ಮೂಟೆಗಳಲ್ಲಿರುವ 288 ಬಾಟ್ಲಿಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಮುಟ್ಟುಗೋಲು ಹಾಕಿಕೊಂಡ ಗೋವಾ ಸರಾಯಿಯು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆಯನ್ನು ಪಡೆಯದಿರುವುದರಿಂದ ಇವನ್ನು ಪೊಲೀಸ್ ನಿರೀಕ್ಷಕರು, ಅಂಕೋಲಾ ಪೊಲೀಸ್ ಠಾಣೆ ಇವರ ಸಮಕ್ಷಮ ಪಂಚನಾಮೆಯ ಮೂಲಕ ನಾಶಪಡಿಸಲು ಅಬಕಾರಿ ಉಪ ನಿರೀಕ್ಷಕರು, ಉಪ ವಲಯ ಅಂಕೋಲಾ ಇವರಿಗೆ ಕಲಂ 43(ಎ)(3) ರನ್ವಯ ಆದೇಶಿಸಿದೆ. ಹಾಗೂ ಖಾಲಿ ಬಾಟ್ಲಿಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಕಲಂ 43(ಎ)(4) ರನ್ವಯ ಅಬಕಾರಿ ನಿರೀಕ್ಷಕರು, ಕುಮಟಾ ವಲಯ ಇವರಿಗೆ ಆದೇಶಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸ್ವಿಯ ಜನವರಿ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಗಣಕೀಕೃತಗೊಳಿಸಿದ ಪ್ರತಿಯನ್ನು ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು).

**ಎಸ್. ಎಸ್. ವಡಕಣ್ಣವರ**
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1 :- ರಮೇಶಕುಮಾರ ಎಚ್.ಬಿ., ಪೊಲೀಸ್ ಉಪ ನಿರೀಕ್ಷಕರು.
ಪ್ರಾ.ಸಾ.ನಂ. 2 :- ಪ್ರಕಾಶ ಗಣಪತಿ ನಾಯ್ಕ
ಪ್ರಾ.ಸಾ.ನಂ. 3 :- ನಾಗೇಂದ್ರ ಮಹಾಬಳೇಶ್ವರ ನಾಯ್ಕ್,

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಕೃಷ್ಣ ಬೊಮ್ಮಯ್ಯ ನಾಯ್ಕ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 :- ಪಂಚನಾಮೆ

ನಿಶಾನೆ ಪಿ1ಎ :- ಪಂಚನಾಮೆಯ ಮೇಲಿನ ಪಂಚ ಸಾಕ್ಷಿದಾರರ ಸಹಿ

ನಿಶಾನೆ ಪಿ1 ಬಿ :- ಪಂಚನಾಮೆಯ ಮೇಲಿನ ಪಿರ್ಯಾದಿಯ ಸಹಿ

ನಿಶಾನೆ ಪಿ2 :- ಪ್ರ.ಮಾ. ವರದಿ.

ನಿಶಾನೆ ಪಿ2ಎ :- ಪ್ರ.ಮಾ.ವರದಿಯ ಮೇಲಿನ ಪಿರ್ಯಾದುದಾರರ ಸಹಿ

ನಿಶಾನೆ ಪಿ3 :- ರಾಸಾಯನಿಕ ವಿಶ್ಲೇಷಣಾ ವರದಿ.

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

............ಇಲ್ಲಾ.............

**ಎಸ್. ಎಸ್. ವಡಕಣ್ಣವರ**

ಪಿ.ಆರ್.223 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

## ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ ಜೆ.ಸಿ.ನಗರ, ಪೊಲೀಸ್ ಠಾಣಾ ಬೆಂಗಳೂರು-560 006

**ವಿಷಯ :** ವಾರಸುದಾರರು ಇಲ್ಲದ ಅಮಾನತ್ತುಪಡಿಸಿರುವ ವಾಹನಗಳನ್ನು ಅವುಗಳ ಮಾಲೀಕರ ಗಮನಕ್ಕೆ ತರುವ ಬಗ್ಗೆ.

ಸಾರ್ವಜನಿಕರಲ್ಲಿ ಈ ಮೂಲಕ ತಿಳಿಸುವುದೇನೆಂದರೆ, ಜೆ.ಸಿ.ನಗರ ಪೊಲೀಸ್ ಠಾಣೆಯಲ್ಲಿ 1999ರ ಸಾಲಿನಿಂದ 2003ನೇ ಸಾಲಿನವರೆಗೆ ಅಮಾನತ್ತುಪಡಿಸಿರುವ ವಾರಸುದಾರರು ಇಲ್ಲದ ಈ ಕೆಳಗೆ ನಮೂದಿಸಿರುವ ವಾಹನಗಳನ್ನು ಅಮಾನತ್ತುಪಡಿಸಿದ್ದು, ಈವರೆವಿಗೆ ಯಾವುದೇ ವಾಹನಗಳ ವಾರಸುದಾರರು ಪತ್ತೆಯಾಗದೆ ಇದ್ದು, ಈ ಬಗ್ಗೆ ವಾಹನಗಳ ಮಾಲೀಕರ ಮತ್ತು ಸಾರ್ವಜನಿಕರ ಗಮನ ಸೆಳೆಯಲು ಹಾಗೂ ಮಾಲೀಕರು ಬಂದು ವಾಹನಗಳನ್ನು ಪಡೆಯಲು ಈ ಮೂಲಕ ಕೋರಲಾಗಿದೆ.

| ಕ್ರ. ಸಂ. | ಸೀಮಿಸ್ ನಂ. | ಪಿಎಫ್ ನಂ. | ಮಾಲುಗಳ ವಿವರ | ಇಂಜಿನ್ ನಂ. | ಚಾಸೀಸ್ ನಂ. |
|---|---|---|---|---|---|
| 1. | 553/1999 | 90/1999 | ಹೀರೋ ಹೊಂಡಾ ನಂ. ಕೆಎ-26-ಇ-3852 | ಹೆಚ್-10-ಎಫ್-627026 | ಹೆಚ್-10-ಎಫ್-572709 |
| 2. | 496/2000 | 64/2000 | ಒಂದು ಹಳೆಯ ಲೂನಾ ಮೊಪೈಡ್ | - | - |
| 3. | 07/2001 | 3/2001 | ಯಮಹ ನಂ. ಕೆಎ-03-ವಿ-1795 | ಐ.ಎಲ್-5-128371 | 97 ಹೆಚ್.ಐ.ಎಲ್-5-128371 |
| 4. | 305/2001 | 69/2001 | ಬಜಾಜ್ ಸ್ಕೂಟರ್ ನಂ. ಸಿ.ಎ.ಕ್ಯೂ-7930 | ಐ.ಎಲ್.ಐ-06-ಇ-013596 | 060ಸಿ-13406 |
| 5. | 273/2002 | 49/2002 | ಲೂನಾ ನಂ. ಸಿ.ಎ.ಆರ್. 8435 | ಕೆ.ಎಲ್-078337 | - |
| 6. | 273/2002 | 49/2002 | ಬಜಾಜ್ ವೆಸ್ಪಾ ನಂ. ಎಂ.ವೈ.ಬಿ-7862 | - | ವಿ-2521 |
| 7. | 75/2003 | 30/2003 | ಕೆನೈಟಿಕ್ ಹೊಂಡಾ ನಂ. ಕೆಎ-03-ಇಸಿ-9424 | ಎಸ್.ಎಲ್.ವಿ-133853 | - |

ಪಿ.ಆರ್.224 ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ ಜೆ.ಸಿ.ನಗರ, ಪೊಲೀಸ್ ಠಾಣೆ ಬೆಂಗಳೂರು-560 006.

## ಜಿಲ್ಲಾ ಖಜಾನೆ ಅಧಿಕಾರಿಗಳ ಕಾರ್ಯಾಲಯ ಗದಗ

**ಪ್ರಕಟಣೆ ಸಂಖ್ಯೆ: ಜಿಖಗ:ಸಿಬ್ಬಂದಿ:ಸಿಆರ್:88:2004-2005 ದಿನಾಂಕ: 22ನೇ ಜನವರಿ 2005**

**ವಿಷಯ :** ರೋಣ ಉಪಖಜಾನೆಯಲ್ಲಿ ಧನಾದೇಶ ಪದ್ಧತಿ ಜಾರಿಗೆ ತರುವ ಕುರಿತು.

**ಉಲ್ಲೇಖ :** 1. ಸರ್ಕಾರಿ ಆದೇಶ ಸಂ: ಆಇ:92:ಅಖಇ:2002: ದಿನಾಂಕ: 17.12.2004

2. ಖಜಾನೆ ನಿರ್ದೇಶಕರ ಪತ್ರ:ಸಂ:ಖನಿ:ಪ್ರಕ್ರಿಯೆ:5:04-05 ದಿನಾಂಕ: 03.01.05.

ಉಲ್ಲೇಖ (1)ರಲ್ಲಿ ನಮೂದಿಸಿದ ಸರ್ಕಾರಿ ಆದೇಶದಲ್ಲಿ ಗದಗ ಜಿಲ್ಲಾ ಖಜಾನೆ ವ್ಯಾಪ್ತಿಯ ರೋಣ ಬ್ಯಾಂಕೇತರ ಉಪಖಜಾನೆಯನ್ನು ಬ್ಯಾಂಕಿಂಗ್ ಉಪಖಜಾನೆಯನ್ನಾಗಿ ಪರಿವರ್ತಿಸಿ ಧನಾದೇಶ ಪದ್ಧತಿಯನ್ನು ಜಾರಿಗೆ ತರುವಂತೆ ಆದೇಶ ನೀಡಿದೆ.

ಉಲ್ಲೇಖ (2)ರಲ್ಲಿ ನಮೂದಿಸಿದ ಮಾನ್ಯ ಖಜಾನೆ ನಿರ್ದೇಶಕರ ಪತ್ರದಲ್ಲಿ ದಿನಾಂಕ: 01.02.2005 ರಿಂದ ಜಾರಿಗೆ ಬರುವಂತೆ ರೋಣ ಉಪಖಜಾನೆಯ ನಗದು ವಹಿವಾಟನ್ನು ಸ್ಥಳೀಯ ಭಾರತೀಯ ಸ್ಟೇಟ್ ಬ್ಯಾಂಕಿಗೆ ವರ್ಗಾಯಿಸಿ ಧನಾದೇಶ ಪದ್ಧತಿಯನ್ನು ಜಾರಿಗೆ ತರಲು ಕ್ರಮತೆಗೆದುಕೊಳ್ಳುವಂತೆ ನಿರ್ದೇಶನ ನೀಡಿದ್ದಾರೆ.

ಅದರಂತೆ ದಿನಾಂಕ:01.02.2005 ರಿಂದ ರೋಣ ಉಪಖಜಾನೆಯು ಬ್ಯಾಂಕಿಂಗ್ ಉಪಖಜಾನೆಯಾಗಿ ಪರಿವರ್ತನೆಗೊಂಡು ಧನಾದೇಶ ಪದ್ಧತಿಯೊಂದಿಗೆ ಕಾರ್ಯನಿರ್ವಹಿಸುತ್ತದೆ ಎಂದು ಪ್ರಕಟಿಸುತ್ತ ಈಗ ನಿರ್ವಹಿಸುತ್ತಿರುವ ಎಲ್ಲ ತರಹದ ನಗದು ವಹಿವಾಟನ್ನು ಸ್ಥಳೀಯ ಭಾರತೀಯ ಸ್ಟೇಟ್ ಬ್ಯಾಂಕ್ ಮುಖಾಂತರ ನಿರ್ವಹಿಸಲಾಗುತ್ತದೆಂದು ಪ್ರಕಟಿಸಿದೆ.

ಈ ಹೊಸ ಪದ್ಧತಿಯಲ್ಲಿ ಎಲ್ಲ ಹಣ ಸೆಳೆಯುವ ಇಲಾಖಾ ಅಧಿಕಾರಿಗಳು, ಪಿಂಚಣಿದಾರರು ಖಜಾನೆಗೆ ನಗದೀಕರಣಕ್ಕಾಗಿ ಸಲ್ಲಿಸುವ ಬಿಲ್ಲುಗಳಿಗೆ ಭಾರತೀಯ ಸ್ಟೇಟ್ ಬ್ಯಾಂಕ್ ರೋಣ ಶಾಖೆಯಲ್ಲಿ ನಗದೀಕರಣಗೊಳ್ಳುವಂತೆ ಧನಾದೇಶ ನೀಡಲಾಗುವುದು. ಅದರಂತೆ ಸರ್ಕಾರಕ್ಕೆ ಜಮಾ ಮಾಡಬೇಕಾದ ಹಣವನ್ನು ನಿಗದಿತ ಚಲನ್ ಫಾರ್ಮುಗಳಲ್ಲಿ ಭರ್ತಿಮಾಡಿ 12 ಅಂಕಿಯ ಲೆಕ್ಕ ಶೀರ್ಷಿಕೆಗಳೊಂದಿಗೆ ಸಂಬಂಧಪಟ್ಟ ಅಧಿಕಾರಿಗಳ ಮೇಲು ರುಜುವಿನೊಂದಿಗೆ ಸ್ಥಳೀಯ ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಜಮಾ ಮಾಡುವಂತೆ ಪ್ರಕಟಿಸಿದೆ.

ಈ ವಿಷಯದಲ್ಲಿ ಯಾವುದೇ ತೊಂದರೆಗಳಿದ್ದಲ್ಲಿ ಪತ್ರಾಂಕಿತ ಉಪಖಜಾನೆ ಅಧಿಕಾರಿಗಳು ರೋಣ ಇವರನ್ನು ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 267240 ಮುಖಾಂತರ ಸಂಪರ್ಕಿಸಬಹುದು.

ಪಿ.ಆರ್.225 ಜಿಲ್ಲಾ ಖಜಾನೆ ಅಧಿಕಾರಿಗಳು, ಗದಗ.

## ಜಿಲ್ಲಾ ಖಜಾನಾಧಿಕಾರಿಯವರ ದ.ಕ. ಮಂಗಳೂರು

## ಪ್ರಕಟಣೆ ಸಂಖ್ಯೆ:ಜಿಖ:ಆಡಳಿತ:43:2004-2005 ದಿನಾಂಕ: 17ನೇ ಜನವರಿ 2005

**ವಿಷಯ :** ಬ್ಯಾಂಕೇತರ ಉಪಖಜಾನೆ ಬಂಟ್ವಾಳ ಬ್ಯಾಂಕಿಂಗ್ ಉಪ ಖಜಾನೆಯನ್ನಾಗಿ ಪರಿವರ್ತಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂ:ಎಫ್‌ಡಿ:92:ಆಖಇ:02 ಬೆಂಗಳೂರು ದಿನಾಂಕ: 11.01.05.

2. ಖಜಾನೆ ನಿರ್ದೇಶಕರು ಬೆಂಗಳೂರು ಇವರ ಪತ್ರ ಸಂಖ್ಯೆ: ನಿ:ಪ್ರಕ್ರಿಯ:5:04-05 ದಿನಾಂಕ: 15.01.2005.

ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳದ ನಾನ್ ಬ್ಯಾಂಕಿಂಗ್ ಉಪ ಖಜಾನೆಯನ್ನು ಬ್ಯಾಂಕಿಂಗ್ ಉಪ ಖಜಾನೆಯನ್ನಾಗಿ ಪರಿವರ್ತಿಸಿ "ನಿಗದಿತ ದಿನಾಂಕ" ದಂದು ಉಪ ಖಜಾನೆಯ ನಗದು ವಹಿವಾಟನ್ನು ಸ್ಥಳೀಯ ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು ಇಲ್ಲಿಗೆ ವರ್ಗಾಯಿಸಲು ಆದೇಶಿಸಿದೆ.

ಉಲ್ಲೇಖ (2)ರಲ್ಲಿ ಖಜಾನೆ ನಿರ್ದೇಶಕರು ಬೆಂಗಳೂರು ಇವರು ನಿಗದಿತ ದಿನಾಂಕ ಅಂದರೆ ದಿನಾಂಕ: 01.02.2005 ರಂದು ಬಂಟ್ವಾಳ ಉಪ ಖಜಾನೆಯ ನಗದು ವಹಿವಾಟನ್ನು ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇಲ್ಲಿಗೆ ವರ್ಗಾಯಿಸಲು ಕ್ರಮ ಕೈಗೊಳ್ಳುವಂತೆ ನಿರ್ದೇಶನ ನೀಡಿದ್ದಾರೆ. ಆದುದರಿಂದ 01.02.2005 ರಿಂದ ಬಂಟ್ವಾಳ ಉಪ ಖಜಾನೆಯು ಬ್ಯಾಂಕಿಂಗ್ ಖಜಾನೆಯಾಗಿ ಪರಿವರ್ತನೆಗೊಂಡು ಚೆಕ್ಕು ಪದ್ಧತಿಯೊಂದಿಗೆ ಕಾರ್ಯನಿರ್ವಹಿಸುತ್ತದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

ಬಂಟ್ವಾಳ ಉಪ ಖಜಾನೆಯಲ್ಲಿ ಹಣ ಸೆಳೆಯುವ ಅಧಿಕಾರಿಗಳು ಮತ್ತು ಪಿಂಚಣಿದಾರರು ಹಾಗೂ ಎಲ್ಲಾ ಸಾರ್ವಜನಿಕರು ಇನ್ನು ಮುಂದೆ ದಿನಾಂಕ: 01.02.2005 ರಿಂದ ಬಂಟ್ವಾಳ ಉಪ ಖಜಾನೆಯ ಎಲ್ಲಾ ನಗದು ವಹಿವಾಟನ್ನು ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯ ಮುಖಾಂತರ ನಡೆಸಲು ತಿಳಿಸಲಾಗಿದೆ.

ಈ ಹೊಸ ಪದ್ಧತಿಯಲ್ಲಿ ಬಟವಾಡೆ ಅಧಿಕಾರಿಗಳಿಗೆ ಪಿಂಚಣಿದಾರರಿಗೆ ಅವರು ಸಲ್ಲಿಸಿದ ಬಿಲ್ಲುಗಳಿಗೆ ಉಪ ಖಜಾನೆಯಲ್ಲಿ ಚೆಕ್ಕು ನೀಡಲಾಗುವುದು, ಚೆಕ್ಕನ್ನು ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇಲ್ಲಿ ನಗದು ಮಾಡಿಸಿಕೊಳ್ಳುವುದು. ಸರ್ಕಾರಕ್ಕೆ ಜಮೆ ಮಾಡಬೇಕಾದ ಹಣವನ್ನು ನಿಗದಿತ ಚಲನಿನ ನಮೂನೆಯಲ್ಲಿ ಭರ್ತಿ ಮಾಡಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬಂಟ್ವಾಳದಲ್ಲಿ ಜಮೆ ಮಾಡತಕ್ಕದ್ದು. ಚಲನ್‌ಗಳ ಮೇಲೆ 12 ಅಂಕಿಗಳ ಲೆಕ್ಕ ಶೀರ್ಷಿಕೆಯನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು ಹಾಗೂ ಸಂಬಂಧಪಟ್ಟ ಅಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು. ಸರಿಯಾದ ಲೆಕ್ಕ ಶೀರ್ಷಿಕೆ ಕೋಡ್ ಹಾಗೂ ಮೇಲು ಸಹಿಯಿಲ್ಲದ ಚಲನುಗಳನ್ನು ಬ್ಯಾಂಕಿನಲ್ಲಿ ಮಾನ್ಯ ಮಾಡಲಾಗುವುದಿಲ್ಲ.

ವಿಷಯದ ಕುರಿತು ಯಾವುದೇ ಅಡಚಣೆಗಳು ಯಾ ಹೆಚ್ಚಿನ ವಿವರಗಳಿಗೆ ಸ್ಥಳೀಯವಾಗಿ ಪತ್ರಾಂಕಿತ ಉಪ ಖಜಾನೆ ಅಧಿಕಾರಿ ಬಂಟ್ವಾಳ ಇವರ ಫೋನ್ ಸಂಖ್ಯೆ: 232819ರ ಮೂಲಕ ಸಂಪರ್ಕಿಸುವುದು.

**ಎಚ್. ದಿವಾಕರ ಹೆಗ್ಡೆ**

ಪಿ.ಆರ್.226 ಜಿಲ್ಲಾ ಖಜಾನೆ ಅಧಿಕಾರಿ, ದ.ಕ. ಮಂಗಳೂರು.

## ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪುರ ಜಿಲ್ಲೆ, ವಿಜಾಪುರ ಇವರ ನ್ಯಾಯಾಲಯದಲ್ಲಿ

## ಪ್ರಥಮ ಮಾಹಿತಿ ವರದಿ ನಂಬರ್: 59:2000 ದಿನಾಂಕ: 31ನೇ ಮಾರ್ಚ್ 2000

## ಅಬಕಾರಿ ಗುನ್ಹೆ ನಂ.6/99-2000 ದಿನಾಂಕ:03.04.2000

**ಉಪಸ್ಥಿತರು :** ಶ್ರೀ ಕೆ. ಆರ್. ಗೌಡ್ರ ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪುರ ಜಿಲ್ಲೆ, ವಿಜಾಪುರ.

**ಫಿರ್ಯಾದುದಾರರು :** ಶ್ರೀ ಎನ್. ಕೆ. ಸಂಬಳ ಪೋಲಿಸ್ ಸಬ್ ಇನ್ಸ್‌ಪೆಕ್ಟರ್ ಬಿಜಾಪುರ ಗ್ರಾಮೀಣ ಪೋಲಿಸ್ ಠಾಣೆ
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ).

**ವಿರುದ್ಧ**

**ಆರೋಪಿತರು :**
1. ಕಲ್ಲಪ್ಪ ನಿಂಗಪ್ಪ ತುರಮುರಿ
2. ಮಡಿವಾಳ ಬಸಪ್ಪ ಮಾದೇಪ್ಪನವರ
3. ಶಿವಪ್ಪ ಮಹಾದೇವಪ್ಪ ಮಾದವನಗರ, ಗರಗ ಜಿ: ಧಾರವಾಡ.
4. ಅನಿಲಕುಮಾರ ಶಂಕರಗೌಡ ಪಾಟೀಲ ಗರಗ ಪೋಸ್ಟ್, ಧಾರವಾಡ ಜಿಲ್ಲೆ, ವಾಹನದ ಮಾಲೀಕರು.

**ಪ್ರಸ್ತಾವನೆ:**

ದಿನಾಂಕ: 31.03.2000 ರಂದು ಬೆಳಗಿನ 1.00 ಗಂಟೆಗೆ ಬಿಜಾಪುರ ಗ್ರಾಮಾಂತರ ಪೋಲೀಸ್ ಠಾಣೆ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತು ತಿರುಗುತ್ತಿದ್ದಾಗ ಖತಿಜಾಪೂರ ಊರ ಹತ್ತಿರ ರಸ್ತೆಯ ಮೇಲೆ ಒಂದು ಮಿನಿ ಗೂಡ್ಸ್ ವಾಹನವು ಬರುತ್ತಿರುವುದನ್ನು ಕಂಡು ಕೈ ಮಾಡಿ ನಿಲ್ಲಿಸಿ ನೋಡಲಾಗಿ ವಾಹನ ಮಿನಿ ಗೂಡ್ಸ್ 407 ಇದ್ದು ಅದರ ಸಂಖ್ಯೆ: ಕೆಎ:25:2965 ಇದ್ದು ಆ ವಾಹನವನ್ನು ತಪಾಸಣೆಗೆ ಒಳಪಡಿಸಲಾಗಿ ಸದರಿ ವಾಹನದ ಒಳಗಡೆ ರಟ್ಟಿನ ಪೆಟ್ಟಿಗೆಗಳು ಇದ್ದು ಅವುಗಳಲ್ಲಿ ಮದ್ಯದ ಬಾಟ್ಲಿಗಳು ಇದ್ದದ್ದು ಕಂಡು ಬಂದಿತು. ವಾಹನದಲ್ಲಿ ಇದ್ದ 3 ಜನ ಆರೋಪಿತರನ್ನು ವಿಚಾರಿಸಲಾಗಿ ಸದರಿ ಮದ್ಯದ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ಲೈಸನ್ಸ್ ಅಥವಾ ರಹದಾರಿ ಪತ್ರಗಳನ್ನು ಕೇಳಲಾಗಿ ಇಲ್ಲವೆಂದು ತಿಳಿಸಿದರು. ಅದನ್ನು ಕೂಡಲೇ ಠಾಣೆಗೆ ತಂದು ಇಬ್ಬರು ಪಂಚರನ್ನು ಕರೆಯಿಸಿ ಪಂಚನಾಮ ಜರುಗಿಸಲಾಯಿತು. ಸದರಿ ಮಿನಿ ಗೂಡ್ಸ್ 407 ವಾಹನದಲ್ಲಿ ಇದ್ದ ಮದ್ಯದ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ ಅದರಲ್ಲಿ 149 ಮದ್ಯದ ಪೆಟ್ಟಿಗೆಗಳು ಇದ್ದವು. ರಸಾಯನಿಕ ಪರೀಕ್ಷೆ ಗೋಸ್ಕರ ರಸಾಯನಿಕ ಮಾದರಿಗಳನ್ನು ತೆಗೆದು ಪಂಚರ ಸಮಕ್ಷಮ ಪಂಚನಾಮೆ ಜರುಗಿಸಲಾಯಿತು. ವಾಹನದಲ್ಲಿ ಇದ್ದ ಆರೋಪಿತರನ್ನು ಬಂಧಿಸಿ ಬಿಜಾಪುರ ಗ್ರಾಮೀಣ ಪೋಲೀಸ್ ಠಾಣೆ ಗುನ್ಹೆ ನಂಬರ್:59:2000 ದಾಖಲಿಸಿಕೊಂಡು ನ್ಯಾಯಾಲಯಕ್ಕೆ ಪ್ರಥಮ ವರ್ತಮಾನ ವರದಿ ಸಲ್ಲಿಸಿದ್ದು ಇರುತ್ತದೆ. ನಂತರ ಜಪ್ತಿ ಮಾಡಿದ ಮುದ್ದೇಮಾಲು ವಾಹನ ಮಿನಿ ಗೂಡ್ಸ್ 407 ಸಂಖ್ಯೆ: ಕೆಎ:25:2965ನ್ನು ಕಾಗದ ಪತ್ರಗಳು ಹಾಗೂ ಶ್ಯಾಂಪಲ್ ಬಾಟ್ಲಿಗಳೊಂದಿಗೆ ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪವಲಯ ಇವರಿಗೆ ಹಸ್ತಾಂತರ ಮಾಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪ ವಲಯ ಇವರು ಅಬಕಾರಿ ಗುನ್ಹೆ ನಂ:6:99:2000 ದಿನಾಂಕ: 03.04.2000 ರಂದು ದಾಖಲಿಸಿಕೊಂಡು ಮುಂದಿನ ತನಿಖೆ ನಡೆಸಲು ಮಾದರಿ ಸೀಸೆಗಳನ್ನು ರಸಾಯನಿಕ ತಜ್ಞರ ವಿಶ್ಲೇಷಣೆಗೆ ಕಳುಹಿಸಿ ವರದಿ ಪಡೆದು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ರಸಾಯನಿಕ ತಜ್ಞರು ತಮ್ಮ ವರದಿಯಲ್ಲಿ ಮುದ್ದೇಮಾಲಿನಲ್ಲಿ ಮಾದಕ ದ್ರವ್ಯದ ಅಂಶವಿರುವುದಾಗಿ ದೃಢಪಟ್ಟಿರುತ್ತದೆ. ಮತ್ತು ಅದು ಮಾನವ ಸೇವನೆಗೆ ಯೋಗ್ಯವೆಂದು ತಿಳಿಸಿರುತ್ತಾರೆ. ಮುಂದುವರಿಯುತ್ತಾ ಸದರಿ ಪ್ರಕರಣದಲ್ಲಿ ಈ ಪ್ರಾಧಿಕಾರದಲ್ಲಿ ಲಭ್ಯವಿದ್ದ ದಾಖಲಾತಿಗಳನ್ನು ಪರಿಶೀಲಿಸಿದಾಗ್ಗೆ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ಬಿಜಾಪುರ ಇವರ ಆದೇಶದ ನಂಬರ್:ಇಎಕ್ಸ್‌ಇ:ಡಿಟಿಸಿಆರ್:267:99-2000 ದಿನಾಂಕ: 4.03.2002 ರಂದು ಆದೇಶವನ್ನು ಹೊರಡಿಸಿ ಸದರಿ ಗುನ್ಹೆಯನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 45ರಲ್ಲಿ ಇತ್ಯರ್ಥಗೊಳಿಸಿರುತ್ತಾರೆ. ಆದರೆ ಸದರಿ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 45ರ ಪ್ರಕಾರ ಇತ್ಯರ್ಥಪಡಿಸಿದಲ್ಲಿ ಅರ್ಜಿದಾರರು ಅಬಕಾರಿ ಸನ್ನದು ಹೊಂದಿದವರು ಇರಬೇಕಾಗಿರುತ್ತದೆ. ಮತ್ತು ಸದರಿ ಆದೇಶದಲ್ಲಿ ಜಪ್ತು ಮಾಡಿದ ಮುದ್ದೇಮಾಲಿನ ಬಗ್ಗೆ ಯಾವುದೇ ಆದೇಶವನ್ನು ನೀಡಿರುವುದಿಲ್ಲಾ. ಮತ್ತು ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನಕ್ಕೆ 1,05,000/- ಮೌಲ್ಯವನ್ನು ಪಾವತಿ ಮಾಡುವ ಷರತ್ತಿಗೆ ಒಳಪಟ್ಟು ಇಲಾಖಾವತಿಯಿಂದ ರೂ.15,000/-ಗಳು ದಂಡ ವಿಧಿಸಿ ಮುಕ್ತಾಯಗೊಳಿಸಿರುತ್ತಾರೆ.

ಈ ಪ್ರಕರಣ ಮುಂದುವರಿಯುತ್ತಾ ಸದರಿ ಆದೇಶದಲ್ಲಿ ಜಪ್ತು ಮಾಡಿದ ಮುದ್ದೇಮಾಲಿನ ವಿಲೇವಾರಿ ಬಗ್ಗೆ ಯಾವುದೇ ಉಲ್ಲೇಖವಿರುವುದಿಲ್ಲ. ಮತ್ತು ಅಧಿಕೃತ ಅಧಿಕಾರಿಗಳ ಹಿಂದಿನ ಆದೇಶದಲ್ಲಿ ವಾಹನದ ಮಾಲೀಕರು ತಪ್ಪನ್ನು ಒಪ್ಪಿಕೊಂಡಿದ್ದಾರೆ ಎಂಬುದಾಗಿ ಮಾತ್ರ ತಿಳಿಸಿರುತ್ತಾರೆ. ಆದರೆ ವಾಹನದ ಮಾಲೀಕರ ಅರ್ಜಿ ಅಬಕಾರಿ ಉಪ ತನಿಖಾಧಿಕಾರಿಗಳ ಕಡತದಲ್ಲಾಗಲೀ ಅಥವಾ ಅಬಕಾರಿ ನಿರೀಕ್ಷಕರು ಬಿಜಾಪುರ ವಲಯದಲ್ಲಾಗಲೀ ಇದರ ಪ್ರತಿ ಕಂಡು ಬಂದಿರುವುದಿಲ್ಲಾವೆಂದು ಅಬಕಾರಿ ನಿರೀಕ್ಷಕರು ಬಿಜಾಪುರ ವಲಯ ರವರು ವರದಿ ಸಲ್ಲಿಸಿರುತ್ತಾರೆ. ಮತ್ತು ಈ ಪ್ರಾಧಿಕಾರದ ಡಿಟಿಸಿಆರ್ ಫೈಲ್‌ನಂಬರ್:267:99-2000 ಲಭ್ಯವಿರುವುದಿಲ್ಲಾ. ಮುಂದುವರಿಯುತ್ತಾ ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಮುದ್ದೇಮಾಲನ್ನು 29.04.2000 ರಿಂದ 31.05.2000 ದಿನಾಂಕದ ಒಳಗೆ ಸನ್ನದುದಾರರಿಗೆ ರಹದಾರಿ ಪತ್ರದ ಮೂಲಕ ವಿಲೇ ಮಾಡಿದ್ದು ಕಂಡು ಬಂದಿದ್ದು ಹೀಗೆ ವಿಲೇ ಮಾಡಿದ್ದರಿಂದ ರೂ. 29,875/- ಮದ್ಯದ ಬೆಲೆ, ರೂ.57,680/- ಅಬಕಾರಿ ಕರ, ರೂ. 55,176/- ಮಾರಾಟ ಕರ ರೂ.25,638/- ಲೀಟರ್ ಫೀ 600 ರೂ. ಪರ್ಮಿಟ್ ಫೀ ಹೀಗೆ ಒಟ್ಟು ರೂ.1,68,982/- ರೂ.ಗಳು ಸರ್ಕಾರಕ್ಕೆ ಸಂದಾಯವಾಗಿರುವುದು ಕಂಡು ಬಂದಿರುತ್ತದೆ. ಪ್ರಸ್ತುತ ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಮಿನಿ ಗೂಡ್ಸ್ 407 ಕೆಎ:25:2965 ವಾಹನವನ್ನು ಈ ಪ್ರಾಧಿಕೃತ ಅಧಿಕಾರಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 45ರ ಪ್ರಕಾರ ವಿಲೇ ಮಾಡಿದ ನಂತರ ದಂಡದ ಹಣ 15,000/- ರೂಪಾಯಿಗಳನ್ನು ವಾಹನದ ಬೆಲೆ ರೂ.1,05,000/- ಗಳನ್ನು ಇದುವರೆವಿಗೂ ಪಾವತಿ ಮಾಡಿ ವಾಹನ ವಾಪಸ್ಸು ಪಡೆದಿರುವುದಿಲ್ಲಾ. ಮತ್ತು ಸದರಿ ಆದೇಶ ನಂಬರ್ ಇಎಕ್ಸ್‌ಇ: ಡಿಟಿಸಿಆರ್:267:99-2000 ದಿನಾಂಕ: 04.03.2000 ರ ಆದೇಶದಂತೆ ಸರ್ಕಾರಕ್ಕೆ ದಂಡದ ಹಣ ವಾಹನದ ಬೆಲೆಯನ್ನು ಪಾವತಿ ಮಾಡುವ ಷರತ್ತಿಗೆ ಒಳಪಟ್ಟು ಆದೇಶವನ್ನು ನೀಡಿದ್ದು ಇರುತ್ತದೆ. ಈ ಕಾರಣಗಳಿಂದ ಈ ಪ್ರಕರಣದಲ್ಲಿ ವಾಹನದ ಮಾಲೀಕರಿಗೆ ದಿನಾಂಕ: 18.10.2004 ರಂದು ಕಾರಣ ಕೇಳುವ ನೋಟಿಸು ನೀಡಲಾಯಿತು. ಈ ನೋಟಿಸು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪವಲಯ ಇವರು ವಾಹನದ ಮಾಲೀಕರಾದ ಅನಿಲಕುಮಾರ ಶಂಕರಗೌಡ ಪಾಟೀಲ ಸಾ:ಗರಗ, ಜಿಲ್ಲಾ: ಧಾರವಾಡ ಇವರಿಗೆ ದಿನಾಂಕ: 3.11.2004 ರಂದು ಜಾರಿ ಮಾಡಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ದಿನಾಂಕ: 12.01.2005 ರಂದು ಅಬಕಾರಿ ಉಪ ನಿರೀಕ್ಷಕರು ಗ್ರಾಮೀಣ ಉಪ ವಲಯ ಇವರು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ ವಾಹನದ ಮಾಲೀಕರಿಗೆ ನೋಟಿಸು ಜಾರಿ ಮಾಡಿ 71 ದಿನಗಳು ಕಳೆದರೂ ಇದುವರೆಗೂ ಯಾವುದೇ ವ್ಯಕ್ತಿಯು ವಾಹನದ ಬಗ್ಗೆ ವಿಚಾರಿಸಲು ಈ ಉಪವಲಯಕ್ಕೆ ಬಂದಿರುವುದಿಲ್ಲಾ. ಮತ್ತು ಸದರಿ ವಾಹನವು ಮಳೆ, ಗಾಳಿ, ಬಿಸಿಲಿಗೆ ಸಿಕ್ಕಿ ಹಾಳಾಗುವುದರಿಂದ ಮತ್ತು ಹವಾಮಾನದ ವೈಪರೀತ್ಯಗಳಿಗೆ ತನ್ನ ಗುಣಮಟ್ಟವನ್ನು ಕಳೆದುಕೊಂಡು ಮೌಲ್ಯ ಕಡಿಮೆಯಾಗುವುದರಿಂದಾ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ವಾಹನ ಸಂಖ್ಯೆ: ಕೆಎ:25:2965 ರ ಮಾಲೀಕರಾದ ಅನಿಲಕುಮಾರ ಶಂಕರಗೌಡ ಪಾಟೀಲ ಸಾ:ಗರಗ ಜಿಲ್ಲಾ: ಧಾರವಾಡ, ಇವರಿಗೆ ನೋಟಿಸು ತೆಗೆದು ನಿಮ್ಮ ಮೇಲೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಯಾಕೆ ಕ್ರಮ ತೆಗೆದುಕೊಳ್ಳಬಾರದು? ನೀವು ದಂಡದ ಹಣ ಮತ್ತು ವಾಹನದ ಮೌಲ್ಯ ಸರ್ಕಾರಕ್ಕೆ ಪಾವತಿ ಮಾಡದೇ ಇರುವುದರಿಂದಾ ನಿಮ್ಮ ವಾಹನವನ್ನು ಸರ್ಕಾರಕ್ಕೆ ಯಾಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಮತ್ತು ಬಹಿರಂಗ ಹರಾಜು ಮಾಡಬಾರದು? ಎಂಬ ಬಗ್ಗೆ ನಿಮ್ಮ ವಿವರಣೆಗಳು ಏನಾದರೂ ಇದ್ದಲ್ಲಿ ಈ ನ್ಯಾಯಾಲಯದ ಆದೇಶವನ್ನು ಜಾರಿ ಮಾಡಿದ ಏಳು (7) ದಿನಗಳ ಒಳಗೆ ಈ ಪ್ರಾಧಿಕಾರಕ್ಕೆ ತಿಳಿಸತಕ್ಕದ್ದು. ಹಾಗೊಂದು ವೇಳೆ ನೀವು ಈ ನಿಗದಿತ ಅವಧಿಯ ಒಳಗೆ ಅಹವಾಲನ್ನು ಸಲ್ಲಿಸದಿದ್ದ ಪಕ್ಷದಲ್ಲಿ ಈ ಪ್ರಾಧಿಕಾರದಿಂದ ನೀಡಿದ ಆದೇಶದ ನಂಬರ್:ಇಎಕ್ಸ್‌ಇ:ಡಿಟಿಸಿಆರ್:267:99-2000 ದಿನಾಂಕ: 04.03.2000 ಆದೇಶವನ್ನು ರದ್ದುಗೊಳಿಸಲಾಗುವುದು ಮತ್ತು ನಿಮಗೆ ಸೇರಿದ ವಾಹನವನ್ನು ರಾಜ್ಯ ಸರ್ಕಾರಕ್ಕೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಪ್ರಕಾರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶವನ್ನು ಹೊರಡಿಸಲಾಗುವುದು ಎಂದು ಕಾರಣ ಕೇಳುವ ನೋಟಿಸಿನಲ್ಲಿ ತಿಳಿಸಲಾಗಿತ್ತು. ಆದರೆ ಈ ಪ್ರಕರಣವು ದಾಖಲಾಗಿ ಸುಮಾರು ನಾಲ್ಕು (4) ವರ್ಷ ಹತ್ತು (10)ತಿಂಗಳು ಕಳೆದರೂ ಈವರೆಗೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ವಾಹನದ ಬಿಡುಗಡೆಗೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲಾ. ಮತ್ತು ವಾಹನದ ಬಿಡುಗಡೆ ಬಗ್ಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲಾ.

ಈ ಬಗ್ಗೆ ಪ್ರಾಧಿಕಾರವು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಪ್ರಕಾರ ವಿಚಾರಣೆಯನ್ನು ನಡೆಸಲು ಕ್ರಮ ಕೈಕೊಂಡು ಎಲ್ಲಾ ಸಾಕ್ಷಿದಾರರಿಗೆ ಹಾಜರಾಗಲು ನೋಟಿಸು ಜಾರಿ ಮಾಡಿ ವಿಚಾರಣೆ ನಡೆಸಲಾಯಿತು.

ಅಭಿಯೋಜನೆಯ ಪರವಾಗಿ ಸಾಕ್ಷಿದಾರರು ಪಿಡಬ್ಲ್ಯೂ-1 ಮತ್ತು ಪಿ.ಡಬ್ಲ್ಯೂ-2 ರಂತೆ ವಿಚಾರಣೆ ಮಾಡಿ ಮೂರು (3) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರ್ತಿಸಿಕೊಂಡಿದ್ದು ಇರುತ್ತದೆ. ಪಿ.ಡಬ್ಲ್ಯೂ-1 ರವರು ತಾವು ದಿನಾಂಕ: 18.01.2005 ರಂದು ಸಾಕ್ಷಿಯನ್ನು ನೀಡುತ್ತಾ ಕಳೆದ 2 ವರ್ಷದಿಂದ ಬಿಜಾಪುರ ನಗರ ಉಪ ವಲಯದಲ್ಲಿ ಅಬಕಾರಿ ಉಪ ನಿರೀಕ್ಷಕರು ಅಂತಾ ಸೇವೆ ಸಲ್ಲಿಸುತ್ತಿದ್ದು ದಿನಾಂಕ: 26.04.2000 ರಂದು ಬಿಜಾಪುರ ಗ್ರಾಮೀಣ ಉಪ ವಲಯದಲ್ಲಿ ಅಬಕಾರಿ ರಕ್ಷಕ ಅಂತಾ ಸೇವೆ ಸಲ್ಲಿಸುತ್ತಿದ್ದೆ, ಅಂದು ಮೇಲಾಧಿಕಾರಿಗಳಾದ ಶ್ರೀ ಎ. ಎಸ್. ಹಜೇರಿ, ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪವಲಯ ಇವರ ಆದೇಶದ ಮೇರೆಗೆ, ಈ ಪ್ರಕರಣದಲ್ಲಿ ಬೇರ್ಪಡಿಸಿದ ಮಾದರಿ ಬಾಟ್ಲಿಗಳನ್ನು ರಸಾಯನಿಕ ಪರೀಕ್ಷೆಗೆ ತೆಗೆದುಕೊಂಡು ಹೋದೆ. ಶ್ಯಾಂಪಲ ಬಾಟ್ಲಿಗಳೊಂದಿಗೆ ಒಂದು ಕವರಿಂಗ್ ಲೆಟರ್ ಅಬಕಾರಿ ಉಪ ನಿರೀಕ್ಷಕರು ಕೊಟ್ಟಿದ್ದರು ಅದರ ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ-1ಎ ಅಂತಾ ಗುರುತಿಸಿದ್ದು, ದಿನಾಂಕ: 28.04.2000 ರಂದು ರಸಾಯನಿಕ ವಿಶ್ಲೇಷಣಾ ವರದಿ ಹಾಗೂ ಶ್ಯಾಂಪಲ್ ಬಾಟ್ಲಿಗಳನ್ನು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪವಲಯ ಇವರಿಗೆ ತಂದು

ಒಪ್ಪಿಸಿದೆ. ಸದರಿ ವರದಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ-2ಎ ಅಂತಾ ಗುರುತಿಸಲಾಯಿತು ಅಂತಾ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿದಾರರ ಸಾಕ್ಷ್ಯವನ್ನು ಅಲ್ಲಗಳೆಯಲು ಮಿನಿ ಗೂಡ್ಸ್ ವಾಹನದ ಮಾಲೀಕರು ಹಾಜರಾಗದೆ ಇರುವುದರಿಂದ ಅಲ್ಲಗಳೆದಿರುವುದಿಲ್ಲಾ. ಈ ಕಾರಣದಿಂದ ಇವರ ಸಾಕ್ಷಿ ಕೂಡಾ ನಂಬಲು ಅರ್ಹರು ಇರುತ್ತಾರೆ.

ಪಿಡಬ್ಲ್ಯೂ-2 ರವರು ದಿನಾಂಕ: 31.01.2005 ರಂದು ಸಾಕ್ಷವನ್ನು ನುಡಿಯುತ್ತಾ ದಿನಾಂಕ: 31.03.2000 ರಂದು ಬೆಳಗಿನ ಜಾವ 1.00 ಗಂಟೆಯ ಸುಮಾರಿಗೆ ನಾವು ಪೆಟ್ರೋಲಿಂನಲ್ಲಿ ಇದ್ದಾಗ ಖತಿಜಾಪೂರ ಹತ್ತಿರ ಒಂದು ಗೂಡ್ಸ್‌ಗಾಡಿ ಬಂದಿದ್ದು ಅದನ್ನು ಕೈ ಮಾಡಿ ನಿಲ್ಲಿಸಿ ಅದರ ನಂಬರ್ ನೋಡಲಾಗಿ ಕೆಎ:25:2965 ಇದ್ದು ಆ ವಾಹನದಲ್ಲಿ ಪರಿಶೀಲನೆ ಮಾಡಿ ನೋಡಲಾಗಿ ಅದರಲ್ಲಿ ರಟ್ಟಿನ ಬಾಕ್ಸ್‌ಗಳು ಇದ್ದು ಸದರಿ ಪೆಟ್ಟಿಗೆಗಳಲ್ಲಿ ಮದ್ಯದ ಬಾಟ್ಲಿಗಳು ಇದ್ದು ಅದರ ಬಗ್ಗೆ ಯಾವುದಾದರು ಲೈಸನ್ಸ್ ವಗೈರೆ ಇದೆಯೇ ಎಂದು ವಾಹನದಲ್ಲಿ ಇದ್ದಂಥಹ ಆರೋಪಿತರನ್ನು ಕೇಳಲಾಗಿ, ಇಲ್ಲಾ ಎಂದು ಹೇಳಿದರು. ಅದನ್ನು ಕೂಡಲೇ ಠಾಣೆಗೆ ತಂದು ಇಬ್ಬರು ಪಂಚರನ್ನು ಕರೆಯಿಸಿ ಪಂಚರ ಸಮಕ್ಷಮ ಪಂಚನಾಮೆ ಮಾಡಿ ಒಟ್ಟು ಅದರಲ್ಲಿ 149 ಬಾಕ್ಸ್‌ಗಳಿದ್ದು ಪ್ರತಿಯೊಂದು ಪೆಟ್ಟಿಗೆಯಲ್ಲಿ 180 ಮಿಲಿಯ 48 ಬಾಟ್ಲಿಗಳು ಇದ್ದವು. ಅವುಗಳನ್ನು ಜಪ್ತಿ ಮಾಡಿ ತಾಬಾಕ್ಕೆ ತೆಗೆದುಕೊಂಡೆ 180 ಮಿಲಿಯ ರಾಜಾಜಿನ್ 1890 ಬಾಟ್ಲಿಗಳು, ರಾಜಾ ವಿಸ್ಕಿ 180 ಮಿಲಿಯ 98 ಬಾಟ್ಲಿಗಳು ರಾಜಾ ರಮ್ ಒಟ್ಟು 26 ಬಾಕ್ಸ್‌ಗಳು ಅವು 180 ಮಿಲಿಯ ಬಾಟ್ಲಿಗಳು ಇದ್ದವು ಈ ರೀತಿ ಮದ್ಯದ ಬಾಟ್ಲಿಗಳು ಇದ್ದು ಪ್ರತಿಯೊಂದು ಬ್ರ್ಯಾಂಡಿನಿಂದ ಕೆಲವು ಬಾಟ್ಲಿಗಳನ್ನು ರಸಾಯನಿಕ ಪರೀಕ್ಷೆಯ ಕುರಿತು ಶ್ಯಾಂಪಲ್ ತೆಗೆದುಕೊಂಡಿತು. ಸದರಿ ಮುದ್ದೇಮಾಲನ್ನು ಜಪ್ತಿ ಮಾಡಿ ಆರೋಪಿ 1) ಕಲ್ಲಪ್ಪ ತುರಮುರಿ, 2) ಮಡಿವಾಳಪ್ಪ ಮಾಚಪ್ಪನವರ, 3) ಶಿವಪ್ಪ ಮಾದಪ್ಪನವರ, ಇವರುಗಳನ್ನು ದಸ್ತಗಿರಿ ಮಾಡಿ ಬಿಜಾಪುರ ಗ್ರಾಮೀಣ ಪೊಲೀಸ್ ಠಾಣೆ ಗುನ್ಹೆ ನಂಬರ್:59:2000, ಪ್ರಕರಣವನ್ನು ದಾಖಲಿಸಿಕೊಂಡೆನು ನಂತರ ಜಪ್ತು ಮಾಡಿದ ಮುದ್ದೇಮಾಲು ಹಾಗೂ ವಾಹನ ನಂಬರ್ ಕೆಎ:25:2965 ನೇದ್ದನ್ನು ಹಾಗೂ ಶ್ಯಾಂಪಲ್ ಬಾಟ್ಲಿಗಳನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮೀಣ ಉಪ ವಲಯ ಇವರಿಗೆ ಹಸ್ತಾಂತರ ಮಾಡಿದೇನು. ಪ್ರಥಮ ವರ್ತಮಾನದ ವರದಿಯನ್ನು ಈಗ ನೋಡಲಾಗಿ ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಮತ್ತು ಅದರಲ್ಲಿ ಇರತಕ್ಕಂಥ ಸಹಿಯನ್ನು ಗುರುತಿಸಿದರು. ಅದಕ್ಕೆ ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಮೂಲ ಪಂಚನಾಮೆಯನ್ನು ನೋಡಿ ಗುರುತಿಸಿದರು, ಮತ್ತು ಅದರಲ್ಲಿ ಇರುವಂತೆ ಸಹಿ ನನ್ನದು ಇರುತ್ತದೆ. ಎಂದು ತಿಳಿಸಿದರು ಅದಕ್ಕೆ ನಿಶಾನೆ ಪಿ-3, ಎಂದು ಗುರುತಿಸಲಾಯಿತು, ನಂತರ ಕಾಗದ ಪತ್ರಗಳನ್ನು ಮತ್ತು ಮಾದರಿ ಸೀಸೆಗಳನ್ನು ಹಾಗೂ ಮುದ್ದೇಮಾಲನ್ನು ಅಬಕಾರಿ ಸಬ್ ಇನ್ಸ್‌ಪೆಕ್ಟರ್ ಬಿಜಾಪುರ ಗ್ರಾಮೀಣ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತೇನೆ. ವಾಹನವನ್ನು ಈ ದಿವಸ ಅಬಕಾರಿ ಕಛೇರಿಯ ಆವರಣದಲ್ಲಿ ಇದ್ದು ಸದರಿ ವಾಹನವನ್ನು ನೋಡಿದೆ. ಆ ದಿವಸ ನಾನು ಮದ್ಯ ಸಾಗಿಸುತ್ತಿರುವಾಗ ಹಿಡಿದ ವಾಹನವು ಇದೇ ವಾಹನ ಇರುತ್ತದೆ. ಎಂದು ತಿಳಿಸಿದರು ಅದನ್ನು ಎಂ.ಓ-1 ಎಂದು ಗುರುತಿಸಲಾಯಿತು. ರಸಾಯನಿಕ ಪರೀಕ್ಷೆಗಾಗಿ ತೆಗೆದ ಮಾದರಿ ಸೀಸೆಗಳನ್ನು ಈ ದಿನ ನೋಡಿದೆ, ಅದರಲ್ಲಿ ಇರತಕ್ಕಂಥ ಸಹಿಯು ನನ್ನದು ಇರುತ್ತದೆ. ಎಂದು ನುಡಿದರು ಅದನ್ನು ಎಂ.ಓ-2 ಎಂದು ಗುರುತಿಸಲಾಯಿತು, ಎಂದು ಸಾಕ್ಷ್ಯ ನುಡಿದಿರುತ್ತಾರೆ. ಈ ಸಾಕ್ಷಿದಾರರು ವಾಹನ ಜಪ್ತಿ ಮಾಡಿದ್ದು ಈ ದಿವಸ ಸದರಿ ವಾಹನವನ್ನು ನೋಡಿ ತಾನು ಜಪ್ತುಮಾಡಿದ ವಾಹನ ಇದೆ ಎಂದು ಗಟ್ಟಿಯಾಗಿ ಹೇಳಿದ್ದರಿಂದ ಈ ಸಾಕ್ಷಿ ಅಲ್ಲಗಳೆಯಲು ಬರುವುದಿಲ್ಲಾ ಹಾಗೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗದೆ ಇರುವುದರಿಂದ ಈ ಸಾಕ್ಷಿ ಅಲ್ಲಗಳೆಯಲಾಗದಕ್ಕೆ ಪುಷ್ಠಿ ನೀಡುತ್ತದೆ.

ಈ ಮೇಲೆ ವಿಚಾರಣೆಗೆ ಒಳಪಡಿಸಿರುವ ಪಿರ್ಯಾದಿದಾರರು ಮತ್ತು ಅಬಕಾರಿ ಉಪ ತನಿಖಾಧಿಕಾರಿಗಳು ಪ್ರಕರಣದ ವಿಚಾರಣೆಯಲ್ಲಿ ಪೂರ್ವಕವಾಗಿ ಸಾಕ್ಷಿ ನೀಡಿದ್ದು ಈ ಕಾರಣದಿಂದ ಜಪ್ತುಗೊಳಿಸಿದ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದು ಸಾಬೀತಾಗಿರುತ್ತದೆ.

ಈ ಕಾರಣಗಳಿಂದ ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು ತಟಸ್ಥ ಸ್ಥಿತಿಯಲ್ಲಿ ಹಾಗೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವ ಇರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43 (ಸಿ) ಅಡಿಯಲ್ಲಿ ಮಿನಿ ಗೂಡ್ಸ್ 407 ನಂಬರ್:ಕೆಎ:25:2965 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶದ ನಂಬರ್:ಇಎಕ್ಸ್‌ಇ:ಡಿಟಿಸಿಆರ್:267:99-2000 ದಿನಾಂಕ: 2ನೇ ಫೆಬ್ರವರಿ 2005**

ಕೆ. ಆರ್.ಗೌಡ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ)ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43 (ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ಅನ್ವಯ ಪಿ.ಎಸ್.ಐ. ಬಿಜಾಪುರ ಗ್ರಾಮಾಂತರ ಪೊಲೀಸ್ ಠಾಣೆ ಇವರ ಮೊಕದ್ದಮೆ ಸಂಖ್ಯೆ:59:2000, ದಿನಾಂಕ: 31.03.2000 ದಲ್ಲಿ ವಶಪಡಿಸಿಕೊಂಡಿರುವ ವಾಹನ ಮಿನಿ ಗೂಡ್ಸ್ ಗಾಡಿ (407) ನಂಬರ್ ಕೆಎ:25:2965ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದ ಆದೇಶ ಸಂಖ್ಯೆ: ಇಎಕ್ಸ್‌ಇ:ಡಿಟಿಸಿಆರ್:267:99-2000 ದಿನಾಂಕ: 4.03.2002 ನೇದರಂತೆ ಈ ಪ್ರಕರಣದಲ್ಲಿ ಇಲಾಖಾವತಿಯಿಂದ ಇತ್ಯರ್ಥಪಡಿಸಿದ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ಸಿಲುಕಿರುವ ಆರೋಪಿತರ ಮೇಲೆ ಹಾಗೂ ವಾಹನದ ಮಾಲೀಕರ ಮೇಲೆ ದೋಷಾರೋಪಣೆ ಪಟ್ಟಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಲು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಗ್ರಾಮಾಂತರ ಉಪವಲಯ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ: 02.02.2005 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

**ಕೆ. ಆರ್. ಗೌಡ್ರ**

ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

**(ಪಿರ್ಯಾದಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ)**

| | | |
|---|---|---|
| ಪ್ರಾ.ಸಾ-1 | ಮಲ್ಲಪ್ಪ ಭೀಮಪ್ಪ ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ನಗರ ಉಪವಲಯ | ತನಿಖಾಧಿಕಾರಿ |
| ಪ್ರಾ.ಸಾ-2 | ಎನ್. ಕೆ. ಸಂಬಳ ಪೊಲೀಸ್ ಇನ್ಸ್‌ಪೆಕ್ಟರ್ ಡಿ.ಸಿ.ಐ.ಬಿ. ಬಿಜಾಪುರ | ತನಿಖಾಧಿಕಾರಿ |

**ಅನುಬಂಧ-2**

**(ಪಿರ್ಯಾದಿದಾರರ ಪರಮಂಡಿಸಲಾದ ದಾಖಲೆಗಳು)**

| | |
|---|---|
| ನಿಶಾನೆ-ಪಿ-1 | ಪ್ರಥಮ ಮಾಹಿತಿ ವರದಿಯ ಪ್ರತಿ |
| ನಿಶಾನೆ-ಪಿ-1(ಎ) | ರಸಾಯನಿಕ ಪರೀಕ್ಷೆಗೆ ಕಳಿಸಿದ ಕವರಿಂಗ್ ಲೆಟರ್ |
| ನಿಶಾನೆ-ಪಿ-2 | ಪ್ರಥಮ ಮಾಹಿತಿ ವರದಿಯ ಪ್ರತಿ ಮೇಲೆ ಪ್ರಾಸಾ-2 ರವರ ಸಹಿ |
| ನಿಶಾನೆ-ಪಿ-2(ಎ) | ರಸಾಯನಿಕ ವಿಶ್ಲೇಷಕರ ವರದಿ ಪ್ರತಿ |
| ನಿಶಾನೆ-ಪಿ-3 | ಮೂಲ ದೃಢೀಕೃತ ಪಂಚನಾಮೆ ಪ್ರತಿ |

**ಅನುಬಂಧ-3**

**(ಪಿರ್ಯಾದಿದಾರರ ಪರ ಗುರುತಿಸಲಾದ ವಸ್ತುಗಳು)**

1) ಎಂ.ಓ.-1 ವಾಹನ ನಂಬರ್ ಕೆಏ:25:2965 ಮಿನಿ ಗೂಡ್ಸ್ 407

2) ಎಂ.ಓ.-2 ಮಾದರಿ ಮದ್ಯದ ಬಾಟ್ಲಿಗಳು

**ಅನುಬಂಧ-4**

**(ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು)**

............ಇಲ್ಲಾ.............

**ಅನುಬಂಧ-5**

**(ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು)**

..........ಇಲ್ಲಾ..........

**ಕೆ. ಆರ್. ಗೌಡ್ರ**

ಪಿ.ಆರ್.228

ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬಿಜಾಪುರ ಜಿಲ್ಲೆ, ಬಿಜಾಪುರ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹುಡುಕುಂಟೆ ಗ್ರಾಮ, ಮಾಗಡಿ ತಾಲ್ಲೂಕು ಸರ್ವೆ ನಂ. 12ರ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 178, ಕಲ್ಲು ಗಣಿ ಗುತ್ತಿಗೆ ಸಂಖ್ಯೆ 154 ಮತ್ತು ಕಲ್ಲು ಗಣಿ ಗುತ್ತಿಗೆ ಸಂಖ್ಯೆ 155ರ ಗುತ್ತಿಗೆ ಮೇಲಿನ ಬಾಕಿಯನ್ನು ಗುತ್ತಿಗೆಗಳ ಮೇಲೆ ಪಾವತಿಸಲಾದ ಭದ್ರತಾ ಠೇವಣಿ ಮೊತ್ತಕ್ಕೆ ಹೊಂದಾಣಿಕೆ ಮಾಡಿಕೊಂಡು ಗುತ್ತಿಗೆಗಳ ಅಧ್ಯರ್ಪಣೆಯನ್ನು ಒಪ್ಪಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ಮನವಿದಾರರ ಪತ್ರದ ದಿನಾಂಕ: 31.3.2004.
2. ಉಪ ನಿರ್ದೇಶಕರು, ಬೆಂಗಳೂರು ಉತ್ತರ ರವರ ಪತ್ರ ಸಂಖ್ಯೆ: ಗಭೂಇ:ಉನಿಬೆಂಉ:ಕಗಗುವಿ:2004-05:5471 ದಿನಾಂಕ: 20.10.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕು ಹುಡುಕುಂಟೆ ಗ್ರಾಮದ ಸರ್ವೆ ನಂ. 12ರಲ್ಲಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 178ನ್ನು 1.15 ಎಕರೆ ಪ್ರದೇಶಕ್ಕೆ ದಿನಾಂಕ: 23.4.1998 ರಿಂದ 10 ವರ್ಷಗಳಿಗೆ, ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 154ನ್ನು 2.00 ಎಕರೆ ಪ್ರದೇಶಕ್ಕೆ ಇದೇ ಸರ್ವೆ ನಂಬರ್‌ನಲ್ಲಿ ದಿನಾಂಕ: 18.1.1998 ರಿಂದ 5 ವರ್ಷಗಳಿಗೆ ಮತ್ತು ಇದೇ ಸರ್ವೆ ನಂಬರ್‌ನಲ್ಲಿಯ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 155ನ್ನು 1.15 ಎಕರೆ ಪ್ರದೇಶಕ್ಕೆ ದಿನಾಂಕ: 18.1.1998 ರಿಂದ 5 ವರ್ಷಗಳಿಗೆ ಮೂರು ಕಲ್ಲು ಗಣಿ ಗುತ್ತಿಗೆಗಳು ಶ್ರೀ ಬಿ. ಆರ್. ಎಸ್. ಕುಮಾರ್ ರವರಿಗೆ ಮಂಜೂರು ಮಾಡಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಹಾಗೂ ಸದರಿ ಗುತ್ತಿಗೆದಾರರ ಮನವಿ ಪತ್ರದ ದಿನಾಂಕ: 31.3.2004 ರಲ್ಲಿ ಸದರಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 154ರ ಮೇಲಿನ ಪೂರ್ಣ ರಾಜಧನ ಬಾಕಿ ಪಾವತಿಸಿ ರೂ.12,090.00 ಹೆಚ್ಚಿಗೆ ರಾಜಧನ ಪಾವತಿ ಇದ್ದು ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 155ರ ಮೇಲಿನ ಪೂರ್ಣ ರಾಜಧನ ಬಾಕಿ ಪಾವತಿಸಿ ರೂ.1,988.00ಗಳ ಹೆಚ್ಚಿಗೆ ರಾಜಧನ ಪಾವತಿ ಇದ್ದು ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 178ರ ಮೇಲೆ ರೂ. 13,456.00 ಗಳ ರಾಜಧನ ಬಾಕಿ ಉಳಿದಿದ್ದು ಸದರಿ ಬಾಕಿಗೆ ಕಲ್ಲು ಗಣಿ ಗುತ್ತಿಗೆಸಂಖ್ಯೆ 154 ಮತ್ತು 155ರ ಮೇಲಿನ ಹೆಚ್ಚಿಗೆ ಪಾವತಿಯಾದ ರೂ.12,090.00 ಮತ್ತು 1,988.00 ಒಟ್ಟು ರೂ.14,078.00ಗಳನ್ನು ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 174ರ ಮೇಲಿನ ರಾಜಧನ ಬಾಕಿ ರೂ.13,456.00 ಗಳ ಬಾಕಿ ಮಾಹಿತಿ ವಿವರವು ಉಪನಿರ್ದೇಶಕರು, ಬೆಂಗಳೂರು ಉತ್ತರರವರ ಉಲ್ಲೇಖಿತ ಪತ್ರ 2ರಲ್ಲಿ ತಿಳಿಸಿದಂತೆ ಹೊಂದಾಣಿಕೆ ಮಾಡಿಕೊಂಡು ರೂ.622.00ಗಳ ಹೆಚ್ಚಿನ ರಾಜಧನ ಪಾವತಿ ಉಳಿದಿರುವುದರಿಂದ, ಕಲ್ಲು ಗಣಿ ಗುತ್ತಿಗೆದಾರರಾದ ಶ್ರೀ ಬಿ. ಆರ್. ಎಸ್. ಕುಮಾರ್ ರವರು ತಮ್ಮ ಮನವಿ ಪತ್ರದಲ್ಲಿ ಕೋರಿಕೆಯಂತೆ ಗುತ್ತಿಗೆಗಳ ಮೇಲಿನ ಬಾಕಿ ಪೂರ್ಣ ಪಾವತಿಯಾಗಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 19(2) ರಂತೆ ಸರ್ಕಾರದ ಅಧಿಸೂಚನೆ 3 ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ: 2.7.1993 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 154, ಸಂಖ್ಯೆ 155 ಮತ್ತು ಸಂಖ್ಯೆ 178 ರ ಗುತ್ತಿಗೆಗಳನ್ನು ಅಧ್ಯರ್ಪಣೆ ಒಪ್ಪಿರುವ ಬಗ್ಗೆ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ:ಕಗಗು:154:155:178:2004-05:15841: ದಿನಾಂಕ: 31ನೇ ಜನವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 19(2)ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕು, ಹುಡುಕುಂಟೆ ಗ್ರಾಮದ ಸರ್ವೆ ನಂ.12ರಲ್ಲಿ ಶ್ರೀ ಬಿ.ಆರ್.ಎಸ್. ಕುಮಾರ್ ರವರಿಗೆ ಮಂಜೂರಾಗಿರುವ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 154 ರ 2.00 ಎಕರೆ ಪ್ರದೇಶ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 155 ರಲ್ಲಿ 1.15 ಎಕರೆ ಪ್ರದೇಶ ಮತ್ತು 178 ರಲ್ಲಿ 1.15 ಎಕರೆ ಪ್ರದೇಶವನ್ನು ಅಧ್ಯರ್ಪಣೆ ಕೋರಿರುವ ದಿನಾಂಕ: 31.3.2004ರ ವರೆಗಿನ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 154ರ ಮೇಲಿನ ಪೂರ್ಣ ರಾಜಧನ ಪಾವತಿಯಾಗಿ ಅಧಿಕ ಪಾವತಿ ರೂ.12,090.00 ಗಳನ್ನು ಮತ್ತು 155ರ ಮೇಲಿನ ಪೂರ್ಣ ರಾಜಧನ ಪಾವತಿಯಾಗಿ ಅಧಿಕ ಪಾವತಿ ರೂ.1,988.00ಗಳನ್ನು ಕಲ್ಲು ಗಣಿ ಗುತ್ತಿಗೆ ಸಂಖ್ಯೆ:178ರ ಮೇಲಿನ ರಾಜಧನ ಬಾಕಿ ರೂ.13,456.00 ಗಳಿಗೆ ಎರಡು ಗುತ್ತಿಗೆಗಳ ಮೇಲಿನ ಅಧಿಕ ಪಾವತಿ ಒಟ್ಟು ಮೊತ್ತವಾದ ರೂ.14,078ನ್ನು ಗುತ್ತಿಗೆ ಮೇಲಿನ ಬಾಕಿಗೆ ಹೊಂದಾಣಿಕೆ ಮಾಡಿಕೊಂಡು ಮೂರು ಗುತ್ತಿಗೆಗಳ ಮೇಲಿನ ಬಾಕಿ ಪೂರ್ಣ ಪಾವತಿಯಾಗಿದ್ದು ಅಧ್ಯರ್ಪಣೆ ಕೋರಿರುವ ದಿನಾಂಕ: 31.3.2004 ರಂದು ಕಲ್ಲು ಗಣಿ ಗುತ್ತಿಗೆಗಳನ್ನು ಅಧ್ಯರ್ಪಣೆ ಒಪ್ಪಿಕೊಳ್ಳಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

ಪಿ.ಆರ್.229

**ಪೊಲೀಸ್ ಕಮೀಷನರ್‌ರವರ ಕಛೇರಿ ಬೆಂಗಳೂರು ನಗರ**

**ತಿದ್ದುಪಡಿ ಅಧಿಸೂಚನೆ ಸಂಖ್ಯೆ: 44-ಎ:ಸಂವಿ:ಸಿಓಪಿ:2004 ದಿನಾಂಕ: 24ನೇ ಜನವರಿ 2005**

ಬೆಂಗಳೂರು ನಗರ ಮಹಾತ್ಮಾಗಾಂಧಿ ರಸ್ತೆಯ ಟ್ರಿನಿಟಿ ವೃತ್ತದಿಂದ ಪ್ರಾರಂಭವಾಗುವ ವಿಮಾನ ನಿಲ್ದಾಣ ರಸ್ತೆಯ ಮಾರತ್‌ಹಳ್ಳಿವರೆಗೆ ಸರ್ಕಾರಿ ಮತ್ತು ಖಾಸಗಿ ಬಸ್ಸುಗಳು ಹಾಗೂ ಇತರೆ ಸಾರ್ವಜನಿಕ ವಾಹನಗಳ ಸಂಚಾರ ದಟ್ಟಣೆಯು ದಿನದಿಂದ ದಿನಕ್ಕೆ ಅಧಿಕಗೊಂಡು ವಾಹನಗಳು ವೇಗವಾಗಿ ಚಲಿಸಲು ಸಾಧ್ಯವಾಗದೆ ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಹಾಗೂ ಹೆಚ್ಚಿನ ಅಪಘಾತಗಳು ಸಂಭವಿಸುತ್ತಿರುವುದು ಕಂಡುಬಂದಿರುತ್ತದೆ. ಈ ರಸ್ತೆಯು ಗಣ್ಯ ವ್ಯಕ್ತಿಗಳು ಮತ್ತು ಅತಿಗಣ್ಯ ವ್ಯಕ್ತಿಗಳ ಸಂಚರಿಸುವ ಏಕಮಾತ್ರ ರಸ್ತೆಯಾಗಿರುತ್ತೆ. ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಹಾಗೂ ಸಂಭವಿಸುತ್ತಿರುವ ರಸ್ತೆ ಅಪಘಾತಗಳನ್ನು ತಹಬಂದಿಗೆ ತರಲು ಈ ರಸ್ತೆಯಲ್ಲಿ ಖಾಸಗಿ ಬಸ್ಸುಗಳ ಸಂಚಾರವನ್ನು ನಿಷೇಧಿಸಿ ದಿನಾಂಕ: 11.11.2004 ರಂದು ಸಂಖ್ಯೆ:44:ಸಂವಿ:ಸಿಓಪಿ:2004ರ ಅಧಿಸೂಚನೆಯಲ್ಲಿ ಹೊರಡಿಸಲಾಗಿದ್ದು ಆದೇಶದಲ್ಲಿ "ಸ್ಟೇಜ್ ಕ್ಯಾರಿಯೇಜ್ ಮತ್ತು ಕಂಟ್ರಾಕ್ಟ್ ಕ್ಯಾರಿಯೇಜ್" ಬಸ್ಸುಗಳು ಎಂಬುದಕ್ಕೆ ಬದಲಾಗಿ "ಖಾಸಗಿ" ಎಂದು ನಮೂದಿಸಿದೆ. ಅದನ್ನು ಸ್ಟೇಜ್ ಕ್ಯಾರಿಯೇಜ್ ಮತ್ತು ಕಂಟ್ರಾಕ್ಟ್ ಕ್ಯಾರಿಯೇಜ್" ಎಂದು ಬದಲಾಯಿಸುವ ಅವಶ್ಯಕತೆ ಇದೆ. ಆದುದರಿಂದ ದಿನಾಂಕ: 11.11.2004ರ ಅಧಿಸೂಚನೆಯಲ್ಲಿ "ಖಾಸಗಿ" ಪದ ಇರುವ ಕಡೆ "ಸ್ಟೇಜ್ ಕ್ಯಾರಿಯೇಜ್ ಮತ್ತು ಕಂಟ್ರಾಕ್ಟ್ ಕ್ಯಾರಿಯೇಜ್" ಬಸ್ಸುಗಳು ಎಂದು ತಿದ್ದುಪಡಿ ಮಾಡಲಾಗಿದೆ.

ಹಾಗೂ ಈ ಪ್ರದೇಶದ ಸಾರ್ವಜನಿಕರ/ನಗರವಾಸಿಗಳ/ಕಾರ್ಮಿಕರ ದೈನಂದಿನ ಕೆಲಸಕ್ಕೆ ತೊಂದರೆಯಾಗದಂತೆ ಬೆಂಗಳೂರು ನಗರ ಸಾರಿಗೆ ಸಂಸ್ಥೆ (ಬಿ.ಎಂ.ಟಿ.ಸಿ) ಹಾಗೂ ಕಾರ್ಖಾನೆಗಳ ಬಸ್ಸುಗಳನ್ನು ಈ ಅಧಿಸೂಚನೆಯಿಂದ ಹೊರತುಪಡಿಸಿದೆ.

ಮೇಲ್ಕಂಡ ತಿದ್ದುಪಡಿಯು ತಕ್ಷಣದಿಂದಲೇ ಜಾರಿಗೆ ಬರುವುದು.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಅಧಿಸೂಚನೆ**

ಮೇಲ್ಕಂಡ ತಿದ್ದುಪಡಿ ಅಧಿಸೂಚನೆ ನಂ.44-ಎ:ಸಂವಿ:ಸಿಓಪಿ:2004 ದಿನಾಂಕ: 07.01.2005ಕ್ಕೆ ಸಂಬಂಧಿಸಿದಂತೆ ಬೆಂಗಳೂರು ನಗರ ಮಹಾತ್ಮಾಗಾಂಧಿ ರಸ್ತೆಯ ಟ್ರಿನಿಟಿ ವೃತ್ತದಿಂದ ಪ್ರಾರಂಭವಾಗುವ ವಿಮಾನ ನಿಲ್ದಾಣ ರಸ್ತೆಯ ಮಾರತ್‌ಹಳ್ಳಿವರೆಗೆ ಸರ್ಕಾರಿ ಮತ್ತು ಖಾಸಗಿ ಬಸ್ಸುಗಳು ಹಾಗೂ ಇತರೆ ಸಾರ್ವಜನಿಕ ವಾಹನಗಳ ಸಂಚಾರ ದಟ್ಟಣೆಯು ದಿನದಿಂದ ದಿನಕ್ಕೆ ಅಧಿಕಗೊಂಡು ವಾಹನಗಳ ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಹಾಗೂ ಹೆಚ್ಚಿನ ಅಪಘಾತಗಳು ಸಂಭವಿಸುತ್ತಿರುವುದು ಕಂಡುಬಂದಿರುತ್ತದೆ. ಈ ರಸ್ತೆಯು ಗಣ್ಯ ವ್ಯಕ್ತಿಗಳು ಮತ್ತು ಅತಿಗಣ್ಯ ವ್ಯಕ್ತಿಗಳು ಸಂಚರಿಸುವ ಏಕಮಾತ್ರ ರಸ್ತೆಯಾಗಿರುತ್ತದೆ. ಸಾರ್ವಜನಿಕ ಹಿತಾಸಕ್ತಿಯಿಂದ ಈ ರಸ್ತೆಯಲ್ಲಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಹಾಗೂ ರಸ್ತೆ ಅಪಘಾತಗಳನ್ನು ತಹಬಂದಿಗೆ ತರಲು ಈ ರಸ್ತೆಯಲ್ಲಿ ಬಸ್ಸುಗಳ ಸಂಚಾರವನ್ನು ನಿಷೇಧಿಸುವುದು ಅವಶ್ಯಕವಾಗಿ ಕಂಡುಬಂದಿರುತ್ತೆ.

ಆದ್ದರಿಂದ ಎಸ್. ಮರಿಸ್ವಾಮಿ, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ, ಬೆಂಗಳೂರು ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ವಿಧಿಸಿದ್ದೇನೆ.

**ಆದೇಶ**

"ಬೆಂಗಳೂರು ನಗರ ಮಹಾತ್ಮಾಗಾಂಧಿ ರಸ್ತೆಯ ಟ್ರಿನಿಟಿ ವೃತ್ತದಿಂದ ವಿಮಾನ ನಿಲ್ದಾಣ ರಸ್ತೆಯ ಮಾರತ್‌ಹಳ್ಳಿ ನಡುವೆ ಬಸ್ಸುಗಳ ಸಂಚಾರವನ್ನು ಪೂರ್ಣವಾಗಿ ನಿಷೇಧಿಸಲಾಗಿದೆ.

**ಹಾಗೂ**

ಈ ಪ್ರದೇಶದ ಸಾರ್ವಜನಿಕರ/ನಗರವಾಸಿಗಳ/ಕಾರ್ಮಿಕರ ದೈನಂದಿನ ಅನುಕೂಲಕ್ಕೆ ತೊಂದರೆಯಾಗದಂತೆ ಬೆಂಗಳೂರು ನಗರ ಸಾರಿಗೆ ಸಂಸ್ಥೆ (ಬಿ.ಎಂ.ಟಿ.ಸಿ) ಹಾಗೂ ಕಾರ್ಖಾನೆಗಳ ಬಸ್ಸುಗಳನ್ನು ಈ ಅಧಿಸೂಚನೆಯಿಂದ ಹೊರತುಪಡಿಸಿದೆ.

ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 18.11.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 11.11.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮಿಷನರ್, ಬೆಂಗಳೂರು ನಗರ.

ಪಿ.ಆರ್.304

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಪೀಣ್ಯ, ಬೆಂಗಳೂರು-58**

**ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ ಕೆ.ಎಸ್.ಎಸ್.ಐ.ಡಿ.ಸಿ. ಶೆಡ್ ನಂ. ಎ.417, 1ನೇ ಅಡ್ಡರಸ್ತೆ 1ನೇ ಹಂತ, (ಪೀಣ್ಯ ಪೊಲೀಸ್ ಸ್ಟೇಷನ್ ಹಿಂಭಾಗ) ಪೀಣ್ಯ, ತುಮಕೂರು ರಸ್ತೆ, ಬೆಂಗಳೂರು-560 058**

**ಸುತ್ತೋಲೆ**

**ಪತ್ರಸಂಖ್ಯೆ: ಎಸ್‌ಟಿವೈ:388:2004-05 ದಿನಾಂಕ: 11ನೇ ಫೆಬ್ರವರಿ 2005**

**ವಿಷಯ :** ಸರ್ಕಾರಿ ಲೇಖನ ಸಾಮಗ್ರಿ ಮಳಿಗೆಯ ಕಟ್ಟಡವನ್ನು ತೆರವುಗೊಳಿಸಿ, ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು-58 ಇಲ್ಲಿಗೆ ಸ್ಥಳಾಂತರಿಸಿರುವುದರ ಬಗ್ಗೆ.

**ಉಲ್ಲೇಖ :** ನಿರ್ದೇಶಕರು, ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇವರ ಆದೇಶ ಸಂಖ್ಯೆ: 843:04-05 ದಿನಾಂಕ: 2.2.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖದಲ್ಲಿನ ಆದೇಶದಲ್ಲಿ ತಿಳಿಯಪಡಿಸಿರುವುದರನ್ವಯ, ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ , ಇಲ್ಲಿನ ಕಟ್ಟಡವನ್ನು ವಿಕಾಸಸೌಧ ನಿರ್ಮಾಣದ ಹಿನ್ನೆಲೆಯಲ್ಲಿ ನೆಲಸಮ ಮಾಡಲಾಗಿದ್ದು, ಸರ್ಕಾರದ ಮುಖ್ಯವಾದ ಕಛೇರಿಗಳಿಗೆ ಸರ್ಕಾರಿ ಕೆಲಸ ಕಾರ್ಯಗಳು ಸುಗಮವಾಗಿ ನಡೆಯಬೇಕಾಗಿರುವುದರ ಹಿತದೃಷ್ಟಿಯಿಂದಾಗಿ ಹಾಗೂ ಲೇಖನ ಸಾಮಗ್ರಿಗಳ ಮಳಿಗೆ, ಕಾಗದ ಉಗ್ರಾಣ ಮತ್ತು ನಮೂನೆಗಳ ವಿಭಾಗಗಳು ಒಂದೇ ಕಡೆ ಇರಬೇಕಾದ ಮುಖ್ಯ ಉದ್ದೇಶದಿಂದಾಗಿ ಸದರಿ ಈ ಕಛೇರಿಯನ್ನು ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್ ನಂ. ಎ 417, ಕೆ.ಎಸ್.ಎಸ್.ಐ.ಡಿ.ಸಿ. 1ನೇ ಅಡ್ಡರಸ್ತೆ, ಬೆಂಗಳೂರು-58, ಇಲ್ಲಿಗೆ (ಪೀಣ್ಯ ಪೊಲೀಸ್ ಸ್ಟೇಷನ್ ಹಿಂಭಾಗ) ದಿನಾಂಕ: 9.2.2005 ರಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಲಾಗಿದೆ.

ಆದ್ದರಿಂದ ಇನ್ನೂ ಮುಂದೆ ಎಲ್ಲಾ ಸರ್ಕಾರಿ ಕಛೇರಿಗಳು ಅವರವರ ಬೇಡಿಕೆಗೆ ಅನುಗುಣವಾಗಿ ಲೇಖನ ಸಾಮಗ್ರಿಗಳನ್ನು ಮೇಲ್ಕಂಡ ಈ ಸ್ಥಳದಲ್ಲಿ ಬೇಡಿಕೆ ಸಲ್ಲಿಸಿ ಲೇಖನ ಸಾಮಗ್ರಿಗಳನ್ನು ಪಡೆದುಕೊಳ್ಳಬಹುದೆಂದು ಈ ಮೂಲಕ ಎಲ್ಲಾ ಇಲಾಖಾ ಕಛೇರಿಗಳ ಮುಖ್ಯಸ್ಥರಿಗೆ ಹಾಗೂ ಕರ್ನಾಟಕ ಸರ್ಕಾರದ ಸಚಿವಾಲಯಗಳ ಇಲಾಖೆಗೆ ಸಂಬಂಧಿಸಿದಂತೆ ಅಧಿಕಾರಿಗಳ ಗಮನಕ್ಕೆ ತರಲಾಗಿದೆ.

ಮುಂದುವರಿದು ಕಛೇರಿಗಳಿಗೆ ಸಂಬಂಧಿಸಿದ ಎಲ್ಲಾ ಪತ್ರಗಳನ್ನು ಅಂಚೆ ಮುಖಾಂತರವಾಗಲಿ ಅಥವಾ ಮುದ್ದಾಂ ಟಪ್ಪಾಲುಗಳನ್ನು ಈ ಮೇಲಿನ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಸಹ ಈ ಮೂಲಕ ತಿಳಿಯಪಡಿಸಲಾಗಿದೆ.

**ನಿರ್ದೇಶಕರು**

ಪಿ.ಆರ್.305

ನಿರ್ದೇಶಕರ ಪರವಾಗಿ

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ಕೆಬೆಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಅರುಣ್ ಗ್ರಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 267ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 267:2004-05/ 4041 ದಿನಾಂಕ: 25.09.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ: ಡಿ.ಸಿ.ಬಿ:ಕಗಗು 267:2004-05:10181 ದಿನಾಂಕ: 6.12.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೆಬೆಹಳ್ಳಿ ಗ್ರಾಮದ ಸರ್ವೆ ನಂ. 234ರಲ್ಲಿ ಮೆ: ಅರುಣ್ ಗ್ರಾನೈಟ್ಸ್ ರವರಿಗೆ 2.00 ಎಕರೆಗೆ ದಿನಾಂಕ: 20.9.1999 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.52,288/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆದಾರರು ಬಾಕಿ ಪಾವತಿಸದೆ ಇರುವುದಾಗಿ ತಿಳಿಸಿ ಗುತ್ತಿಗೆ ರದ್ದುಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:267:2004-05:15865 ದಿನಾಂಕ:31ನೇ ಜನವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಕೆಬೆಹಳ್ಳಿ ಗ್ರಾಮದ ಸರ್ವೆ ನಂ. 234 ರಲ್ಲಿ 2.00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 267ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು

ಆರ್.230

ಗಣಿ ಮತ್ತು ಭೂವಿಜ್ಞಾನ ಇಲಾಖೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಹಾಸನ ಜಿಲ್ಲೆ, ಹಾಸನ**
**ಸಂ: ಕಾಪಕಾ:ಎಫ್:ಎಸ್‌ಆರ್-46:2004**

**ಅರ್ಜಿದಾರರು:**
1. ಶ್ರೀ ಬಿ. ಬಿ. ಗಿರಿಜಮ್ಮ ಉರುಫ್ ಗಿರಿಜ ಕೋಂ ಲೇಟ್ ಸಿ. ಎನ್. ನಾಗರಾಜು ಉರುಫ್ ಸಿ.ಎನ್. ಪರಮೇಶ್ವರಪ್ಪ ಉರುಫ್ ಸಿ. ಎನ್. ಪರಮೇಶ್ 30 ವರ್ಷ.
2. ಶಿಲ್ಪ ಡಾಟರ್ ಆಫ್ ಸಿ. ಎನ್. ನಾಗರಾಜು ಉರುಫ್ ಸಿ. ಎನ್. ಪರಮೇಶ್ವರಪ್ಪ ಉರುಫ್ ಸಿ.ಎನ್. ಪರಮೇಶ, 10 ವರ್ಷ
3. ರಾಜೇಶ್ ಬಿನ್ ಲೇಟ್ ಸಿ. ಎನ್. ನಾಗರಾಜು ಉರುಫ್ ಸಿ. ಎನ್. ಪರಮೇಶ್ವರಪ್ಪ ಉರುಫ್ ಸಿ. ಎನ್. ನಾಗರಾಜು, 6ವರ್ಷ, ವಾಸ: ಚೌರಗಲ್ಲು ಗ್ರಾಮ. ಮಲ್ಲಿಪಟ್ಟಣ ಹೋಬಳಿ, ಅರಕಲಗೂಡು ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಎನ್. ನಂಜೇಗೌಡ ಬಿನ್ ನಂಜೇಗೌಡ, ಇಬ್ಬಡಿ ಗ್ರಾಮ, ದೊಡ್ಡಮಗ್ಗೆ ಹೋಬಳಿ, ಅರಕಲಗೂಡು ತಾ:
2. ಡಿವಿಜನಲ್ ಮ್ಯಾನೇಜರ್, ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಎಸ್.ವಿ. ನಿಲಯ, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸಿ. ಎನ್. ನಾಗರಾಜು ಉ:ಸಿ.ಎನ್. ಪರಮೇಶ್ವರಪ್ಪ ಉ: ಸಿ. ಎನ್. ಪರಮೇಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18.01.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಎನ್. ರಾಮಕೃಷ್ಣ

ಪಿ.ಆರ್.36 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ:ಕಸ:70:04 ದಿನಾಂಕ: 16ನೇ ಡಿಸೆಂಬರ್ 2004**

**ಅರ್ಜಿದಾರರು:**
ತಾಜುದ್ದೀನ್ ಖಾನ್ ಬಿನ್ ಮೊಹಿದ್ದೀನ್ ಸಾಬ್ ಮುಸ್ಲಿಂ, ಲಾರಿ ಹಮಾಲಿ, ಆರ್.ಎಂ. ಸಿ. ಸಂಕೀರ್ಣ ಶ್ರೀಧರನಗರ, ಸಾಗರ ಪೇಟೆ

**ವಿರುದ್ಧ**

**ಪ್ರತಿವಾದಿಗಳು:**
ಕಿಟ್ಟಿ ಅಲಿಯಾಸ್ ಕೃಷ್ಣಮೂರ್ತಿ ಕಟ್ಟಡ ಗುತ್ತಿಗೆದಾರರು ನೆಹರುನಗರ, ಸಾಗರಪೇಟೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಮಹಬೂಬ್ ಆಲಿ ಬಿನ್ ತಾಜುದ್ದೀನ್ ಖಾನ್ ರವರು ಪ್ರತಿವಾದಿಯವರಲ್ಲಿ ಕಾರ್ಮಿಕ ಆಗಿ ಕೆಲಸದ ಮೇಲೆ ಇದ್ದಾಗ 1.2.2003 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 10.12.2004 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್.37 ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-5**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-12:2004 ದಿನಾಂಕ: 27ನೇ ಡಿಸೆಂಬರ್ 2004**

**ಅರ್ಜಿದಾರರು:**
1. ಶ್ರೀಮತಿ ಪದ್ಮಾವತಿ ಕೋಂ ಸಿದ್ದಲಿಂಗಯ್ಯ @ ಸಿದ್ದರಾಜು,
2. ಕು:ರೂಪಾ ಬಿನ್ ಸಿದ್ದಲಿಂಗಯ್ಯ
3. ಕು: ರಶ್ಮಿ ಬಿನ್ ಸಿದ್ದಲಿಂಗಯ್ಯ
4. ಮಾ: ಪುನೀತ್, ಬಿನ್ ಸಿದ್ದಲಿಂಗಯ್ಯ
ವಾಸ: ಶ್ಯಾನುಭೋಗನಹಳ್ಳಿ, ಬಾಚೇನಟ್ಟಿ ಪೋಸ್ಟ್, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಸತ್ಯನಾರಾಯಣ ನಂ. 26/1, 40ನೇ ಕ್ರಾಸ್, 26ನೇ ಮೈನ್, 9ನೇ ಬ್ಲಾಕ್, ಜಯನಗರ, ಬೆಂಗಳೂರು-69.
2. ದಿ ಮ್ಯಾನೇಜರ್ ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ನಂ.52, ವಿನಯ್ ಕಾಂಪ್ಲೆಕ್ಸ್, ವಿ.ವಿ.ರಸ್ತೆ, ಬಸವನಗುಡಿ, ಬೆಂಗಳೂರು
3. ಶ್ರೀ ಮುದ್ದಯ್ಯ ಬಿನ್ ಲೇಟ್ ನಂಜಪ್ಪ (ಮೃತರ ತಂದೆ)
4. ಶ್ರೀಮತಿ ನಂಜಮ್ಮ ಕೋಂ ಮುದ್ದಯ್ಯ (ಮೃತನ ತಾಯಿ)
ವಾಸ: ಕೇರಾಫ್ ಕೃಷ್ಣ, ನಂ.6, 23ನೇ ಕ್ರಾಸ್, ಇಟ್ಟಮಡುವು ಮುಖ್ಯ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 23.12.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ ಹಾಗೂ 2, 3, ಮತ್ತು 4ನೇ ಅರ್ಜಿದಾರರ ತಂದೆ, ಶ್ರೀ ಸಿದ್ದಲಿಂಗಯ್ಯ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಹೃದಯಾಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್. ಬಿ. ರಾಮಚಂದ್ರ**
ಪಿ.ಆರ್.38 ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರು,
ಹಾಗೂ ಕಾರ್ಮಿಕ ಅಧಿಕಾರಿ ಉಪ ವಿಭಾಗ-5 ಬೆಂಗಳೂರು-560 029.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ:ಕಾಅಬ:ಕಾನಪ:ಮಪ್ರ:ಎಸ್ಆರ್-215/2004 ದಿನಾಂಕ: 23ನೇ ಡಿಸೆಂಬರ್ 2004**

**ಅರ್ಜಿದಾರರು:**
1. ನಿರ್ಮಲ ಗಂಡ ಅಶೋಕ ಕಾಂಚನಕೋಟಿ
2. ಭೂಪಾಲ ತಂದೆ ಭೀಮಣ್ಣ ಕಾಂಚನಕೋಟಿ
3. ಸುಮಿತ್ರ ಗಂಡ ಭೂಪಾಲ ಕಾಂಚನಕೋಟಿ
   ವಾಸ: ರಾಮಪೂರ, ತಾಲ್ಲೂಕ್: ಸಿಂದಗಿ, ಜಿಲ್ಲೆ: ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**
1. ಶಿವಾನಂದ ತಂದೆ ಈರಪ್ಪ ವಾಲಿ
   ವಾಸ:ಉಮರಾಣಿ ತಾಲ್ಲೂಕು: ಜತ್ತ, ಜಿಲ್ಲೆ: ಸಾಂಗ್ಲಿ (ಮಹಾರಾಷ್ಟ್ರ ರಾಜ್ಯ)
2. ದಿ ಬ್ರಾಂಚ್ ಮ್ಯಾನೇಜರ್,
   ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ: 1) ನಿರ್ಮಲ ಗಂಡ ಅಶೋಕ ಕಾಂಚನಕೋಟಿ 2) ಭೂಪಾಲ ತಂದೆ ಭೀಮಣ್ಣ ಕಾಂಚನಕೋಟಿ 3) ಸುಮಿತ್ರ ಗಂಡ ಭೂಪಾಲ ಕಾಂಚನಕೋಟಿ ಇವರುಗಳಾದ ತಾವು ಮೃತ ಅಶೋಕ ತಂದೆ ಭೂಪಾಲ ಕಾಂಚನಕೋಟಿ ಇವರ ಹೆಂಡತಿ ಮತ್ತು ತಂದೆ-ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಅಶೋಕ ತಂದೆ ಭೂಪಾಲ ಕಾಂಚನಕೋಟಿ ಇವರು ಒಂದನೇ ಪ್ರತಿವಾದಿಗಳಾದ ಶಿವಾನಂದ ತಂದೆ ಈರಪ್ಪ ವಾಲಿ ಇವರ ಟಾಟಾ 709 ಕೆಎ-29:3599 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್.40 ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರು, ಉಪ ವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

**IN THE COURT OF COMMISSIONER FOR WORKMEN'S COMPENSATION BIDAR**
**No:LOB/WCA/Cr-61/2004**

**Applicants:**
1. Taharunnisa Begum W/o Abdulquadar @ Md Shahir Aged about 35 years Occ: household R/o Anwarpeth Basavakalyan Dist Bidar & 2 Others.

**V/s**

**Respondents:**
1. Abdul Latiet S/o Ismail Sale Chabuth Sawar Age: Major, Occ: Business, R/o Anwarpeth, Basavakalyan Dist Bidar.
2. National Insurance Co. Ltd., Secunderabad (A.P)

**PROCLAMATION**

Sri/Smt Taharunnisa Begum Wo. Abdul quadar @ Md Shahir R/o Anwarpeth Locality Basavakalyan Dist Bidar have/has filed application in this court claiming compensation stating that Late: Abdul Quder @ Md Shahir was working as Cleaner Under the Respondent No. I he met with an accident arising out of and during the course of employment as a result he died on 6.6.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

PR-39 Commissioner for Workmen's Compensation, Bidar.

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-5**

**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-1/2005 ದಿನಾಂಕ: 3ನೇ ಜನವರಿ 2005**

**ಅರ್ಜಿದಾರರು:**

1) ಶ್ರೀ ಟಿ. ಯಾಲಕ್ಕಯ್ಯ, ಬಿನ್ ತಿಮ್ಮಯ್ಯ
2) ಶ್ರೀಮತಿ ಲಕ್ಷ್ಮಮ್ಮ ಕೋಂ ಟಿ. ಯಾಲಕ್ಕಯ್ಯ
3) ಲೋಕೇಶ್ ಬಿನ್ ಟಿ. ಯಾಲಕ್ಕಯ್ಯ
ವಾಸ: ಮುದ್ದಗೆರೆ ಶೆಟ್ಟರಾಯಪಾಳ್ಯ ತೂವಿನಕೆರೆ ಪೋಸ್ಟ್ ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ರಮೇಶ್ ರೆಡ್ಡಿ, ಬಿನ್ ಲೇಟ್ ಚಿನ್ನಸ್ವಾಮಿ ರೆಡ್ಡಿ, ಪ್ರೊಪ್ರೈಟರ್, ಮೆ: ಮಂಜುನಾಥ ಟ್ರಾನ್ಸ್‌ಪೋರ್ಟ್, ಇಚ್ಚನಗೆರೆ ಹಳ್ಳಿ, ಅತ್ತಿಬೆಲೆ ಪೋಸ್ಟ್, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 31.12.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1 ಹಾಗೂ 2ನೇ ಅರ್ಜಿದಾರರ ಮಗ ಮತ್ತು 3ನೇ ಅರ್ಜಿದಾರರ ಅಣ್ಣ ಶ್ರೀ ಎಂ. ವೈ. ಶ್ರೀನಿವಾಸಯ್ಯ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಯ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್. ಬಿ. ರಾಮಚಂದ್ರ**

ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ,
ಉಪವಿಭಾಗ-5, ಬೆಂಗಳೂರು-560 029.

ಪಿ.ಆರ್.141

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್‌ಆರ್‌ಎಫ್:ಸಿಆರ್:67/04-05: ದಿನಾಂಕ: 27ನೇ ಡಿಸೆಂಬರ್ 2004**

**ವಿಷಯ :** ದೇವಮಾತ ಎಜ್ಯುಕೇಷನಲ್ ಫೌಂಡೇಷನ್, ಧರ್ಮ ರಾಂ ಕಾಲೇಜ್, ಚ್ಹಾವರ ಭವನ, ಬೆಂಗಳೂರು-560029 ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ಹುಲ್ಲಹಳ್ಳಿ ಗ್ರಾಮದ ಸ.ನಂ. 67/2, 66/3, 59/3, 59/2, 68/2, 68/3 ಮತ್ತು 66/1 ರಲ್ಲಿ ಒಟ್ಟು 9-22 ಎಕರೆ: ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ದೇವಮಾತ ಎಜ್ಯುಕೇಷನಲ್ ಫೌಂಡೇಷನ್, ಧರ್ಮ ರಾಂ ಕಾಲೇಜ್, ಚ್ಹಾವರ ಭವನ, ಬೆಂಗಳೂರು-560029 ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ಹುಲ್ಲಹಳ್ಳಿ ಗ್ರಾಮದ ಸ.ನಂ. 67/2, 66/3, 59/3, 59/2, 68/2, 68/3 ಮತ್ತು 66/1 ರಲ್ಲಿ ಒಟ್ಟು 9-22 ಎಕರೆ: ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗರವರ ಪತ್ರದ ನಂ: ಎಲ್‌ಆರ್‌ಎಫ್ (109): ಸಿಆರ್ 24/04-05 ದಿನಾಂಕ: 12.11.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 67/2, 66/3, 59/3, 59/2, 68/2, 68/3 ಮತ್ತು 66/1 ರಲ್ಲಿ ಒಟ್ಟು 9-22 ಎಕರೆ: ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ, ಜಯನಗರ, ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 15.7.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ಹುಲ್ಲಹಳ್ಳಿ ಗ್ರಾಮದ ಸ.ನಂ.67/2 ರಲ್ಲಿ 1-00 ಎಕರೆ, 66/3ರಲ್ಲಿ 2.30 ಎಕರೆ:ಗುಂಟೆ, 59/3 ರಲ್ಲಿ 0-19 ಗುಂಟೆ, 59/2 ರಲ್ಲಿ 2-37 ಎಕರೆ:ಗುಂಟೆ, 68/2 ರಲ್ಲಿ 0-17 ಗುಂಟೆ 68/3 ರಲ್ಲಿ 1-15 ಎಕರೆ:ಗುಂಟೆ ಮತ್ತು 66/1 ರಲ್ಲಿ 0-24 ಗುಂಟೆ ಒಟ್ಟು 9-22 ಎಕರೆ:ಗುಂಟೆ ಜಮೀನನ್ನು ದೇವಮಾತ ಎಜ್ಯುಕೇಷನಲ್ ಫೌಂಡೇಷನ್, ಧರ್ಮ ರಾಂ ಕಾಲೇಜ್, ಚ್ಹಾವರ ಭವನ, ಬೆಂಗಳೂರು-560029 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಸಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:

23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.146

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ನಂ: ಎಲ್‌ಆರ್‌ಎಫ್:ಸಿಆರ್:87/04-05: ದಿನಾಂಕ: 16ನೇ ಡಿಸೆಂಬರ್ 2004**

**ವಿಷಯ :** ಮೆ: ಹೆಚ್.ಎಸ್.ಆರ್. ಜ್ಞಾನಜ್ಯೋತಿ ಟ್ರಸ್ಟ್, ನಂ. 810, 7ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, ಹೆಚ್.ಎ.ಎಲ್., 2ನೇ ಹಂತ, ಬೆಂಗಳೂರು ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ. 345, 347, 348 ರಲ್ಲಿ 10.00 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮೆ: ಹೆಚ್.ಎಸ್.ಆರ್. ಜ್ಞಾನಜ್ಯೋತಿ ಟ್ರಸ್ಟ್, ನಂ. 810, 7ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, ಹೆಚ್.ಎ.ಎಲ್., 2ನೇ ಹಂತ, ಬೆಂಗಳೂರು ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ. 345, 347, 348 ರಲ್ಲಿ 10.00 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗರವರ ಪತ್ರದ ನಂ: ಎಲ್‌ಆರ್‌ಎಫ್ (109): ಸಿಆರ್ 33/04-05 ದಿನಾಂಕ: 30.11.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 345, 347, 348 ರಲ್ಲಿ 10.00 ಎಕರೆ: ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ, ಶಿವಾಜಿನಗರ, ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 1.10.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ.345, 347, 348 ರಲ್ಲಿ 10.00 ಎಕರೆ: ಗುಂಟೆ ಜಮೀನನ್ನು ಮೆ: ಹೆಚ್.ಎಸ್.ಆರ್. ಜ್ಞಾನಜ್ಯೋತಿ ಟ್ರಸ್ಟ್, ನಂ.810, 7ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, ಹೆಚ್.ಎ.ಎಲ್., 2ನೇ ಹಂತ, ಬೆಂಗಳೂರು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಸಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್.147 ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್‌ಆರ್‌ಎಫ್:ಸಿಆರ್:91/04-05: ದಿನಾಂಕ: 17ನೇ ಡಿಸೆಂಬರ್ 2004**

**ವಿಷಯ :** ಆದರ್ಶ ವಿದ್ಯಾ ಸಂಘ, ನಂ. 75, 5ನೇ ಮುಖ್ಯರಸ್ತೆ, ಟಿ.ಆರ್.ಮಿಲ್ ಹತ್ತಿರ, ಚಾಮರಾಜಪೇಟೆ, ಬೆಂಗಳೂರು-18 ರವರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸ.ನಂ. 253 ರಲ್ಲಿ 5.00 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಆದರ್ಶ ವಿದ್ಯಾ ಸಂಘ, ನಂ. 75, 5ನೇ ಮುಖ್ಯರಸ್ತೆ, ಟಿ.ಆರ್.ಮಿಲ್ ಹತ್ತಿರ, ಚಾಮರಾಜಪೇಟೆ, ಬೆಂಗಳೂರು-18 ರವರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸ.ನಂ. 253 ರಲ್ಲಿ 5.00 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗರವರ ಪತ್ರದ ನಂ: ಎಲ್‌ಆರ್‌ಎಫ್ (109): ಸಿಆರ್ 43/04-05 ದಿನಾಂಕ: 22.11.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 253 ರಲ್ಲಿ 5.00 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಹಕಾರ ಸಂಘಗಳ ನೋಂದಣಾಧಿಕಾರಿಗಳ ಕಛೇರಿ, ಮೈಸೂರಿನಲ್ಲಿ ದಿನಾಂಕ:17.6.1971 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸ.ನಂ.253 ರಲ್ಲಿ, 5.00 ಎಕರೆ:ಗುಂಟೆ ಜಮೀನನ್ನು ಆದರ್ಶ ವಿದ್ಯಾ ಸಂಘ, ನಂ. 75, 5ನೇ ಮುಖ್ಯರಸ್ತೆ, ಟಿ.ಆರ್.ಮಿಲ್ ಹತ್ತಿರ, ಚಾಮರಾಜಪೇಟೆ, ಬೆಂಗಳೂರು-18 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಸಂ.ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್.148 ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್ಆರ್ಎಫ್:ಸಿಆರ್:101/04-05: ದಿನಾಂಕ: 16ನೇ ಡಿಸೆಂಬರ್ 2004**

**ವಿಷಯ :** ಹೋಲಿ ಸೇಂಟ್ ಎಜುಕೇಷನ್ ಸೊಸೈಟಿ ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಅಗರ ಗ್ರಾಮದ ಸ.ನಂ. 65/3 ಮತ್ತು 67 ರಲ್ಲಿ 4-11 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಹೋಲಿ ಸೇಂಟ್ ಎಜುಕೇಷನ್ ಸೊಸೈಟಿ ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಅಗರ ಗ್ರಾಮದ ಸ.ನಂ. 65/3 ಮತ್ತು 67 ರಲ್ಲಿ 4-11 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗರವರ ಪತ್ರದ ನಂ: ಎಲ್ಆರ್ಎಫ್ (109): ಸಿಆರ್ 43/04-05 ದಿನಾಂಕ: 15.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 65/3 ಮತ್ತು 67 ರಲ್ಲಿ 4.11 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಹಕಾರ ಸಂಘಗಳ ನೊಂದಣಾಧಿಕಾರಿಗಳ ಕಛೇರಿ, ಮೈಸೂರಿನಲ್ಲಿ ದಿನಾಂಕ:1.5.1969 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಅಗರ ಗ್ರಾಮದ ಸ.ನಂ.65/3 ರಲ್ಲಿ, 3.09 ಗುಂಟೆ ಮತ್ತು 67ರಲ್ಲಿ 1.02 ಗುಂಟೆ ಒಟ್ಟು 4.11 ಎಕರೆ:ಗುಂಟೆ ಜಮೀನನ್ನು ಹೋಲಿ ಸೇಂಟ್ ಎಜುಕೇಷನ್ ಸೊಸೈಟಿ ನಂ. 424, 5ನೇ ಕ್ರಾಸ್, 7ನೇ ಬ್ಲಾಕ್ (ಪಶ್ಚಿಮ) ಜಯನಗರ, ಬೆಂಗಳೂರು-560082 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಸಂ.ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.149 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್‌ಆರ್‌ಎಫ್:ಸಿಆರ್:110/03-04: ದಿನಾಂಕ: 16ನೇ ಡಿಸೆಂಬರ್ 2004**

**ವಿಷಯ :** ಅಭ್ಯುದಯ ಎಜ್ಯುಕೇಷನಲ್ ಟ್ರಸ್ಟ್, ನಂ. 208, ವೆಸ್ಟ್ ಮಿನಿಸ್ಟರ್, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು-52 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ ಚಿಕ್ಕಬೆಳ್ಳಂದೂರು ಗ್ರಾಮದ ಸ.ನಂ. 25 ಮತ್ತು 26/1 ಹಾಗೂ ಮುಳ್ಳೂರು ಗ್ರಾಮದ ಸ.ನಂ. 65/1 ಮತ್ತು 66/1 ರಲ್ಲಿ ಒಟ್ಟು 10.23 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಅಭ್ಯುದಯ ಎಜ್ಯುಕೇಷನಲ್ ಟ್ರಸ್ಟ್, ನಂ. 208, ವೆಸ್ಟ್ ಮಿನಿಸ್ಟರ್, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು-52 ರವರು ಬೆಂಗಳೂರು-52 ರವರು ಬೆಂಗಳೂರು ಉತ್ತರ ತಾಲ್ಲೂಕು, ವರ್ತೂರು ಹೋಬಳಿ ಚಿಕ್ಕಬೆಳ್ಳಂದೂರು ಗ್ರಾಮದ ಸ.ನಂ. 25 ಮತ್ತು 26/1 ಹಾಗೂ ಮುಳ್ಳೂರು ಗ್ರಾಮದ ಸ.ನಂ. 65/1 ಮತ್ತು 66/1 ರಲ್ಲಿ ಒಟ್ಟು 10.23 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗರವರ ಪತ್ರದ ನಂ: ಎಲ್‌ಆರ್‌ಎಫ್:ಸಿಆರ್ 325/04-05 ದಿನಾಂಕ: 30.11.2004 ರಲ್ಲಿ ಪ್ರಸ್ತಾಪಿತ ಚಿಕ್ಕಬೆಳ್ಳಂದೂರು ಗ್ರಾಮದ ಸ.ನಂ. 25 ಮತ್ತು 26/1 ಹಾಗೂ ಮುಳ್ಳೂರು ಗ್ರಾಮದ ಸ.ನಂ. 65/1 ಮತ್ತು 66/1 ಒಟ್ಟು 10.23 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ, ಗಾಂಧಿನಗರ, ಉಪನೋಂದಣಾ ಕಛೇರಿಯಲ್ಲಿ ದಿನಾಂಕ:23.6.1990 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಚಿಕ್ಕಬೆಳ್ಳಂದೂರು ಗ್ರಾಮದ ಸ.ನಂ.25 ರಲ್ಲಿ, 10 ಗುಂಟೆ ಮತ್ತು 26/1 ರಲ್ಲಿ 5.37 ಎಕರೆ:ಗುಂಟೆ ಹಾಗೂ ಮುಳ್ಳೂರು ಗ್ರಾಮದ ಸ.ನಂ. 65/1 ರಲ್ಲಿ 1.30 ಎಕರೆ:ಗುಂಟೆ ಮತ್ತು 66/1 ರಲ್ಲಿ 2.26 ಎಕರೆ:ಗುಂಟೆ ಒಟ್ಟು 10-23 ಎಕರೆ:ಗುಂಟೆ ಜಮೀನನ್ನು ಅಭ್ಯುದಯ ಎಜ್ಯುಕೇಷನಲ್ ಟ್ರಸ್ಟ್, ನಂ. 208, ವೆಸ್ಟ್ ಮಿನಿಸ್ಟರ್, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು-52 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.150 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು**

**ಅಧಿಸೂಚನೆ ನಂ: ಪಿಟಿಎಲ್:11:04-05: ದಿನಾಂಕ: 5ನೇ ಜನವರಿ 2005**

**ವಿಷಯ :** ಗೃಹೋಪಯೋಗಿ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸುವ ಸೀಮೆ ಎಣ್ಣೆ ಎಕ್ಸ್-ಡಿಪೋ ದರವನ್ನು ಪರಿಷ್ಕರಿಸುವ ಬಗ್ಗೆ.

**ಉಲ್ಲೇಖ :** 1. ಆಯುಕ್ತರು, ಆನಾಸಗ್ರಾವ್ಯ ಇಲಾಖೆ ರವರ ಕಛೇರಿ ಪತ್ರ ಸಂ: ಸಿಎಫ್‌ಎಸ್: ಪಿಡಿ:111:72: 04-05ರ ದಿನಾಂಕ: 29.10.04.

2. ಉಪ ಮಹಾ ಕಾರ್ಯನಿರ್ವಾಹಕರು, ಭಾರತ ತೈಲ ನಿಗಮರವರ ಕಚೇರಿ ಪತ್ರ ಸಂಖ್ಯೆ: ಐಓಸಿ: ಕೆಎಎಸ್‌ಓ:04ರ ದಿನಾಂಕ: 14.12.2004.

ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ರವರ ಕಚೇರಿಯ ಉಲ್ಲೇಖ (1)ರ ಪತ್ರದಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ಗೃಹೋಪಯೋಗಿ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ವಿತರಿಸುವ ಸೀಮೆಎಣ್ಣೆಯ ಎಕ್ಸ್-ಗೋದಾಮು ದರವನ್ನು ಪರಿಷ್ಕರಿಸಿರುವ ಬಗ್ಗೆ ತಿಳಿಯಪಡಿಸಿ, ಅಗತ್ಯ ಕ್ರಮವಹಿಸಲು ಸೂಚಿಸಿರುತ್ತಾರೆ.

ಭಾರತ ತೈಲ ನಿಗಮದವರು ದಿನಾಂಕ: 14.12.04 ರಂದು ಬರೆದ ಪತ್ರದಲ್ಲಿ ಈ ಪರಿಷ್ಕೃತ ದರವು ದಿನಾಂಕ: 19.8.2004 ರಿಂದಲೇ ಜಾರಿಗೆ ಬಂದಿರುವುದಾಗಿ ತಿಳಿಯಪಡಿಸಿರುತ್ತಾರೆ.

ಆದುದರಿಂದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸಲ್ಪಡುವ ಸೀಮೆಎಣ್ಣೆಗೆ ಸಂಬಂಧಿಸಿದಂತೆ ಈ ಕಚೇರಿಯಿಂದ ದಿನಾಂಕ: 31.7.2002 ರಂದು ಹೊರಡಿಸಿದ್ದ ಆದೇಶವನ್ನು ಪರಿಷ್ಕರಿಸಿ "ದಿ ಕೆರೋಸಿನ್ (ರಿಸ್ಟ್ರಿಕ್ಷನ್ ಆನ್ ಯೂಸ್ ಅಂಡ್ ಸೀಲಿಂಗ್ ಪ್ರೈಸಸ್) ಆರ್ಡರ್ 1993 ರಲ್ಲಿ ಜಿಲ್ಲಾಧಿಕಾರಿಗಳಿಗೆ ದತ್ತವಾದ ಅಧಿಕಾರ ಚಲಾಯಿಸಿ, ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಯಾದ ರಾಜೇಂದರ್ ಕುಮಾರ್ ಕಟಾರಿಯ, ಭಾ.ಆ.ಸೇ., ಆದ ನಾನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವಂತೆ ದರಪಟ್ಟಿಯನ್ನು ಪರಿಷ್ಕರಿಸಿ ಆದೇಶಿಸಿರುತ್ತೇನೆ.

ಈ ಪರಿಷ್ಕರಣೆಯಿಂದ ಸಗಟು/ಚಿಲ್ಲರೆ ಮಾರಾಟ ದರದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಹಾಗೂ ಇನ್ನುಳಿದಂತೆ ದಿನಾಂಕ: 31.7.2002ರ ಅಧಿಸೂಚನೆಯ ಎಲ್ಲಾ ಷರತ್ತುಗಳು ಅನ್ವಯವಾಗುತ್ತವೆ.

**ರಾಜೇಂದರ್ ಕುಮಾರ್ ಕಟಾರಿಯ**

ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ.

ಮಾನ್ಯ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ರವರ ಟೆಲೆಕ್ಸ್ ಸಂ:ಸಿಎಫ್‌ಎಸ್: ಪಿಡಿ:3:11:04-05 ದಿನಾಂಕ: 28.10.2004 ರನ್ವಯ ಕೇಂದ್ರ ಸರ್ಕಾರವು ಸೀಮೆ ಎಣ್ಣೆ ಎಕ್ಸ್-ಗೋದಾಮು ದರವನ್ನು ಪರಿಷ್ಕರಿಸಿರುವುದರಿಂದ ದಿನಾಂಕ: 19.8.2004 ರಿಂದ ಅನ್ವಯವಾಗುವಂತೆ, ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸುವ ನೀಲಿಬಣ್ಣದ ಶ್ರೇಷ್ಠಮಟ್ಟದ ಸೀಮೆ ಎಣ್ಣೆ ದರಪಟ್ಟಿ.

| ಕ್ರ. ಸಂ. | ವಿವರಗಳು | ಚಿಕ್ಕಮಗಳೂರು | ಮೂಡಿಗೆರೆ | ಕೊಪ್ಪ | ಶೃಂಗೇರಿ | ನರಸಿಂಹರಾಜ ಪುರ | ಕಡೂರು | ತರೀಕೆರೆ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | ಸರಬರಾಜು ಸ್ಥಳ | ಮಂಗಳೂರು | ಮಂಗಳೂರು | ಮಂಗಳೂರು | ಮಂಗಳೂರು | ಮಂಗಳೂರು | ಮಂಗಳೂರು | ಮಂಗಳೂರು |
| 2 | ಮಂಗಳೂರಿನ ಪಣಂಬೂರು ಡಿಪೋದಿಂದ ಆಗುವ ದೂರ ಆರ್‌ಟಿ. ಕಿಮೀ | 360 | 278 | 442 | 442 | 442 | 420 | 480 |
| 3 | ಎಕ್ಸೈಸ್ ಡ್ಯೂಟಿ ಸೇರಿ ಎಕ್ಸ್ - ಗೋದಾಮು ದರ | 8105-54 | 8105-54 | 8105-54 | 8105-54 | 8105-54 | 8105-54 | 8105-54 |
| 4 | ಶೇ. 4 ರಂತೆ ಮಾರಾಟ ದರ | 324-22 | 324-22 | 324-22 | 324-22 | 324-22 | 324-22 | 324-22 |
| 5 | ಜುಮ್ಲಾ (ಕಾಲಂ 3+4) | 8429-76 | 8429-76 | 8429-76 | 8429-76 | 8429-76 | 8429-76 | 8429-76 |
| 6 | ಸ್ಥಿರಾಸ್ತಿ ಸಂಬಂಧ ಹಿಂಪಾವತಿ (ರಿಟರ್ನ್ ಆನ್ ಫಿಕ್ಸೆಡ್ ಅಸೆಟ್ಸ್) | 16-38 | 16-38 | 16-38 | 16-38 | 16-38 | 16-38 | 16-38 |
| 7 | ಪರಿಕರಗಳಬಾಬ್ತು ಹೆಚ್ಚುವರಿ ಬಂಡವಾಳ ತೊಡಗಿಸಿದ ಬಾಬ್ತು ಹಿಂಪಾವತಿ (ಎಕ್ವಿಪ್‌ಮೆಂಟ್ ರಿಟರ್ನ್) | 43-25 | 43-25 | 43-25 | 43-25 | 43-25 | 43-25 | 43-25 |
| 8 | ವರ್ಕಿಂಗ್ ಕ್ಯಾಪಿಟಲ್ ಬಾಬ್ತು | 007-76 | 007-76 | 007-76 | 007-76 | 007-76 | 007-76 | 007-76 |
| 9 | ಸೋರುವಿಕೆ (ಸ್ಟಾಕ್ ಲಾಸ್) | 019-03 | 019-03 | 019-03 | 019-03 | 019-03 | 019-03 | 019-03 |
| 10 | ನಿರ್ವಹಣಾ ವೆಚ್ಚ (ಆಪರೇಟಿಂಗ್ ಕಾಸ್ಟ್) | 117-94 | 117-94 | 117-94 | 117-94 | 117-94 | 117-94 | 117-94 |
| 11 | ಗುಡ್ಡಗಾಡು ರಸ್ತೆ ಬಾಬ್ತು ಭತ್ಯೆ | 5-00 | 5-00 | 5-00 | 5-00 | 5-00 | 5-00 | 5-00 |
| 12 | ಸಾಗಾಣಿಕೆ ದರ: | | | | | | | |
| | ಎ) 39 ಕಿಮೀ ವರೆಗೆ | 79-25 | 79-25 | 79-25 | 79-25 | 79-25 | 79-25 | 79-25 |
| | ಬಿ) 39 ರಿಂದ 150 ಕಿಮೀ ವರೆಗೆ | 79-92 | 79-92 | 79-92 | 79-92 | 79-92 | 79-92 | 79-92 |
| | ಸಿ) 150 ಕಿಮೀ ನಿಂದ ಪ್ರತಿ ಮೀಗೆ 68 ಪೈಸೆಯಂತೆ | 142-80 | 87-04 | 198-56 | 198-56 | 198-56 | 183-60 | 224-40 |
| 13 | ಜುಮ್ಲಾ ಸಾಗಾಣಿಕೆ ಮೊಬಲಗು (ಕಾಲಂ 12ರ ಎ+ಬಿ+ಸಿ) | 301-97 | 246-21 | 357-73 | 357-73 | 357-73 | 342-77 | 383-57 |
| 14 | ಆಯಿಲ್ ಕಂಪೆನಿಯವರು ನೀಡುವ ಸಾಗಾಣಿಕೆ ವೆಚ್ಚ ಕಡಿಮೆ ಮಾಡಬೇಕಾದುದು | 128-40 | 106-70 | 164-10 | 164-10 | 164-10 | 0 | 0 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 15 | ಜುಮ್ಲಾ ಸಾಗಾಣಿಕೆ ವೆಚ್ಚ (ಕಾಲಂ 13-14) | 173-57 | 139-51 | 193-63 | 193-63 | 193-63 | 342-77 | 383-57 |
| 16 | ಪ್ರತಿಕೆ ಎಲ್ ಗೆ ಆಗುವ ಮೊಬಲಗು (ಕಾಲಂ 5+6+7+8+9+10+11+15) | 8812-69 | 8778-63 | 8832-75 | 8832-75 | 8832-75 | 8981-89 | 902269 |
| 17 | ಡೋರ್ ಡೆಲಿವರಿಗಾಗಿ ಸ್ಥಳೀಯ ಸಾಗಾಣಿಕೆ ವೆಚ್ಚ | 250-00 | 250-00 | 250-00 | 250-00 | 250-00 | 250-00 | 250-00 |
| 18 | ಹತ್ತಿರದ ಹತ್ತು ಪೈಸೆಗೆ ಚಿಲ್ಲರೆ ದರ ನಿಗದಿಗೊಳಿಸುವ ಬಾಬ್ತು ಸಗಟು ನಾಮಿನಿದಾರರು ಸರ್ಕಾರಕ್ಕೆ ಪ್ರತಿ ಕೆ ಎಲ್ ಗೆ ಕಟ್ಟಬೇಕಾದ ಮೊಬಲಗು | 37-31 | 71-37 | 17-25 | 17-25 | 17-25 | 68-11 | 27-31 |
| 19 | ಸಗಟು ಮಾರಾಟ ದರ ಪ್ರತಿ ಕೆ ಎಲ್ ಗೆ | 9100-00 | 9100-00 | 9100-00 | 9100-00 | 9100-00 | 9300-00 | 9300-00 |
| 20 | ಚಿಲ್ಲರೆ ಲಾಭಾಂಶ ಪತ್ರಿ ಕೆ ಎಲ್ ಗೆ | 300-00 | 300-00 | 300-00 | 300-00 | 300-00 | 300-00 | 300-00 |
| 21 | ಚಿಲ್ಲರೆ ಮಾರಾಟ ದರ ಪ್ರತಿ ಕೆ ಎಲ್ ಗೆ | 9400-00 | 9400-00 | 9400-00 | 9400-00 | 9400-00 | 9600-00 | 9600-00 |
| 22 | ಚಿಲ್ಲರೆ ಮಾರಾಟದ ದರ ಪ್ರತಿ ಲೀಟರಿಗೆ | 009-40 | 009-40 | 009-40 | 009-40 | 009-40 | 009-60 | 009-60 |

**ರಾಜೇಂದರ್ ಕುಮಾರ್ ಕಟಾರಿಯ**

ಪಿ.ಆರ್.151 ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಕುಕ 92 ಪಿಐಎಂ 2004 (ಭಾ) ಬೆಂಗಳೂರು, ದಿನಾಂಕ: 17ನೇ ಜನವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 92 ಪಿಐಎಂ 2004 (ಭಾ) ದಿನಾಂಕ: 26.08.2004ರಲ್ಲಿ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿಯ ಆಡಳಿತಾಧಿಕಾರಿಯನ್ನಾಗಿ ಡಾ: ಬಿ. ಎಸ್. ನಟರಾಜ್, ನಿರ್ದೇಶಕರು, ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರನ್ನು ನೇಮಿಸಲಾಗಿದ್ದು ಸದರಿ ಅಧಿಸೂಚನೆಯನ್ನು ರದ್ದುಪಡಿಸಿ, Karnataka Ayurvedic and Unani Practitioners Registration of Medical Practitioners Miscellaneous Provisions Act 1961ರ Section 6ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಚುನಾಯಿತ ಮಂಡಳಿಯು ಅಸ್ತಿತ್ವಕ್ಕೆ ಬರುವವರೆಗೆ ಶ್ರೀ ಆರ್. ಎಸ್. ರಾಜಗೋಪಾಲ ರಾವ್, ಮುಖ್ಯ ಆಡಳಿತಾಧಿಕಾರಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರನ್ನು ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿಯ ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.152 **ಜಿ. ಜೋಮಾನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**KARNATAKA STATE POLLUTION CONTROL BOARD**

**NOTIFICATION**

**No. KSPCB/183/CC/2003/ Dated: 8th June 2004**

**Sub :** Designating Karnataka State Pollution Control Board employees as Board Analysts under the provisions of the Water Act and Air Act.

**Ref :** Govt. Order No. FEE 43 EPC 2002, dated: 20.03.2004.

In exercise of the powers conferred by Section 53 (3) of the Water (Prevention and Control of Pollution) Act, 1974 read with rule 28 A (1) of the Karnataka S. B. for Prevention and Control of W.P. Rules, 1976 and Section 29 (2) of the Air (Prevention and Control of Pollution) Act, 1981 read with Rule 24 of the Karnataka Air (Prevention and Control of Pollution) Rules, 1983, The Karnataka State Pollution Control Board hereby appoints the following persons as Board analysts for the purpose of analysis of samples of water, sewage/trade effluent, air and emission samples sent for analysis to Laboratories established by the Board.

1. Dr. Balagangadhar, P.h.D. Chief Scientific Officer, Bangalore.
2. H. Lokeshwari, M.Sc., Scientific Officer, Bangalore.
3. Jaya Prakash Subrao Nayak M.Sc., Scientific Officer, Mangalore.
4. Prakash Siddanna goudar, M.Sc., Scientific Officer, Dharwad
5. Kalai Chelvi, MSc., Scientific Officer, Bangalore.
6. T. Bheema Naik, Bsc., Scientific Officer, Raichur

7. C. Vasantha, BSc, Scientific Officer, Mysore
8. P. Shivarudra Swamy, BSc., Scientific Officer, Davangere.
9. N. Nagappa MSc., Deputy Scientific Officer, Bangalore.
10. Panchaiah Nandikol, B.Sc., Deputy Scientific Officer, Bangalore
11. Manjunath, BSc, Deputy Scientific Officer, Raichur.
12. S.H. Gonni, BSc, Deputy Scientific Officer, Dharwad.
13. H.M. Shivakumar, BSc, Deputy Scientific Officer, Mysore
14. S.Y. Sampath Kumar, BSc, Deputy Scientific Officer, Bangalore
15. P. Sarathi, BSc, Assistant Scientific Officer, Bangalore
16. H. Roopadevi, MSc, Assistant Scientific Officer, Bangalore.
17. N. K. Ramegowda BSc, Assistant Scientific Officer, Mysore.
18. N. Kavitha, MSc, Assistant Scientific Officer, Mysore.
19. M. P. Gowdappa, MSc, Assistant Scientific Officer, Belgaum
20. Ravi Gali, MSc, Assistant Scientific Officer, Mangalore.
21. Sridhar Nayak, MSc, Assistant Scientific Officer, Bangalore.

This Notification issues with the approval of the GOK vide their G.O. No. FEE 43 EPC 2002 dated: 20.3.04

PR-156

Member Secretary
Karnataka State Pollution Control Board

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಪಸಂಮೀ 48 ಮೀಇಸೇ 2003 ಬೆಂಗಳೂರು, ದಿನಾಂಕ: 15ನೇ ಜನವರಿ 2005**

**ಭಾಗ-1**

ಶ್ರೀ ಎಸ್. ಸಿ. ಹೇಮಂತ್‌ರಾಜು, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಶಿವಮೊಗ್ಗ, ಇವರಿಗೆ ವೇತನ ಶ್ರೇಣಿ ರೂ. 9580-260-10880-20-13440-380-14200 ರಲ್ಲಿ ಮೀನುಗಾರಿಕೆ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಮೀನುಗಾರಿಕೆ ಉಪ ನಿರ್ದೇಶಕರು, ಕಾರವಾರ ಹುದ್ದೆಗೆ ನೇಮಕ ಮಾಡಿ ಆದೇಶಿಸಿದೆ. ಮೀನುಗಾರಿಕೆ ಉಪ ನಿರ್ದೇಶಕರು, ಕಾರವಾರ ಹುದ್ದೆಯಲ್ಲಿ ಸದರಿ ಅಧಿಕಾರಿಯು ಒಂದು ದಿವಸದ ಕರ್ತವ್ಯವನ್ನು ನಿರ್ವಹಿಸಿದ ನಂತರ ಮಾರನೇ ದಿವಸದಿಂದ ಅನ್ವಯವಾಗುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ನಿಯೋಜನೆ ಮೇರೆಗೆ ಉತ್ತರ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಮಹಾಮಂಡಳಿ (ನಿ) ಕಾರವಾರ, ಇದರ ಪ್ರಧಾನ ವ್ಯವಸ್ಥಾಪಕ ಹುದ್ದೆಗೆ ನೇಮಕ ಮಾಡಿ ಆದೇಶಿಸಿದೆ.

ಶ್ರೀ ಸಿದ್ದಯ್ಯ, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು/ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಹಾಸನ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಡಿ ವೇತನ ಶ್ರೇಣಿ ರೂ. 9580-260-10880-320-13440-380-14200ರ ಮೀನುಗಾರಿಕೆ ಉಪ ನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿ ಮೀನುಗಾರಿಕೆ ಉಪ ನಿರ್ದೇಶಕರು, ಕಾರವಾರ, ಹುದ್ದೆಗೆ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ. ಶ್ರೀ ಎಸ್. ಸಿ. ಹೇಮಂತ್‌ರಾಜುರವರು ಮೀನುಗಾರಿಕೆ ಉಪ ನಿರ್ದೇಶಕರು, ಕಾರವಾರ ಹುದ್ದೆಯ ಪ್ರಭಾರ ವಹಿಸಿಕೊಂಡ ಮಾರನೇ ದಿವಸದಿಂದ ಶ್ರೀ ಸಿದ್ದಯ್ಯನವರು ಸದರಿ ಹುದ್ದೆಯ ಪ್ರಭಾರ ವಹಿಸಿಕೊಳ್ಳತಕ್ಕದ್ದು.

ಶ್ರೀ ಸಿದ್ದಯ್ಯನವರ ಮುಂಬಡ್ತಿಯಿಂದ ತೆರವಾಗುವ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಹಾಸನ, ಈ ಹುದ್ದೆಯಲ್ಲಿ ಶ್ರೀ ಪಿ. ನಾಗರಾಜು, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸನ, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕ ಪ್ರಭಾರದಲ್ಲಿರಿಸಿ ಆದೇಶಿಸಿದೆ.

**ಭಾಗ-2**

ಶ್ರೀ ಡಿ. ಕುಬೇಂದ್ರ ನಾಯಕ್, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ನಿಯೋಜನೆ ಮೇರೆಗೆ ಪ್ರಧಾನ ವ್ಯವಸ್ಥಾಪಕರು, ಉತ್ತರ ಕನ್ನಡ ಜಿಲ್ಲಾ ಸಹಕಾರಿ ಮೀನು ಮಾರಾಟ ಮಹಾಮಂಡಳಿ (ನಿ), ಕಾರವಾರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀ ಎಸ್. ಸಿ. ಹೇಮಂತರಾಜು ಇವರ ಬಡ್ತಿಯಿಂದ ತೆರವಾದ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಶಿವಮೊಗ್ಗ, ಹುದ್ದೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.159

**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ(ಮೀ).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಕುಕ 113 ಹೆಚ್‌ಎಸ್‌ಡಿ 2003 (ಭಾಗ-1) ಬೆಂಗಳೂರು, ದಿನಾಂಕ: 12ನೇ ಜನವರಿ 2005**

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 9.12.2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ/42(1)/ 98-99ರ ಪಟ್ಟಿಯಲ್ಲಿ ಗ್ರಾಮೀಣ ಕೃಪಾಂಕ ರಹಿತ ಆಯ್ಕೆಯಾದ ಪದವೀಧರ ದಂತ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಂತ ಆರೋಗ್ಯಾಧಿಕಾರಿಯಾಗಿ ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ

ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೋಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ದಂತ ಆರೋಗ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ: ಜಿಲ್ಲಾ ಶಸ್ತ್ರ ಚಿಕಿತ್ಸಕರು ಶಸ್ತ್ರ ಚಿಕಿತ್ಸಕರ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸಬೇಕು.

6. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ: ಜಿಲ್ಲಾ ಶಸ್ತ್ರ ಚಿಕಿತ್ಸಕ: ಶಸ್ತ್ರ ಚಿಕಿತ್ಸಕರು ಈಗ ನೇಮಕಾತಿ ಹೊಂದಿರುವ ವೈದ್ಯಾಧಿಕಾರಿಗಳ ಜನ್ಮ ದಿನಾಂಕಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ದೃಢೀಕೃತ ದಾಖಲಾತಿಗಳನ್ನು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಒಂದು ವಾರದೊಳಗಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ:ಆಕುಕ 113 ಹೆಚ್‌ಎಸ್‌ಡಿ 2003 (ಭಾಗ-1) ದಿನಾಂಕ: 12ನೇ ಜನವರಿ 2005ಕ್ಕೆ ಅನುಬಂಧ**

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ಮೀಸಲಾತಿ ಪ್ರವರ್ಗ | ನೇಮಕಾತಿ ನೀಡಲು ಸೂಚಿಸಿರುವ ಸ್ಥಳ |
|---|---|---|---|---|
| 1. | ಡಾ: ಇಮ್ತಿಯಾಜ್ ಅಹ್ಮದ್ ಬಿನ್ ಅಬ್ದುಲ್ ರಜಾಕ್ ಎಂ. ಕೊತ್ವಾಲ್ ಜೋರಾಪುರ್ ಪೇಟ್, ಇಬ್ರಾಹಿಂ ರೋಜಾ ಹತ್ತಿರ, ಬಿಜಾಪುರ. | 16.07.1975 | 11-ಬಿ | ಜಿಲ್ಲಾ ಆಸ್ಪತ್ರೆ, ಬಿಜಾಪುರ |
| 2. | ಡಾ: ಹೇಮ ಮೈಥಿಲಿ ಪಿ. ನಂ. 221, 3ನೇ ಕ್ರಾಸ್ ಕೇಂಬ್ರಿಡ್ಜ್ ಲೇಔಟ್, ಅಲಸೂರು ಬೆಂಗಳೂರು-08 | 24.07.1972 | ಎಸ್‌ಸಿ (ಎಫ್) | ಸಾರ್ವಜನಿಕ ಆಸ್ಪತ್ರೆ ಬೀರೂರು ಚಿಕ್ಕಮಗಳೂರು ಜಿಲ್ಲೆ. |
| 3. | ಡಾ: ಮೀನಾಕ್ಷಿ ಟಿ. ತಂದೆ ತಿಮ್ಮಪ್ಪ ನಂ. 1255, 23ನೇ ಕ್ರಾಸ್ ಬನಶಂಕರಿ 2ನೇ ಹಂತ, ಬೆಂಗಳೂರು. | 18.05.1975 | ಎಸ್‌ಸಿ (ಎಫ್) | ಸಾರ್ವಜನಿಕ ಆಸ್ಪತ್ರೆ ಹಗರಿಬೊಮ್ಮನಹಳ್ಳಿ ಬಳ್ಳಾರಿ ಜಿಲ್ಲೆ. |
| 4. | ಡಾ: ಕುಸುಮ ಸುರಾನ್ ನಂ. ಎಂಐಜಿ 155 ಎಂ.ಎಸ್.ಕೆ. ಮಿಲ್, ಶಾಂತಿನಗರ ಗುಲ್ಬರ್ಗಾ. | 01.10.1971 | ಎಸ್‌ಸಿ (ಎಫ್) | ಸಾರ್ವಜನಿಕ ಆಸ್ಪತ್ರೆ ಗಜೇಂದ್ರಗಡ ಗದಗ್ ಜಿಲ್ಲೆ. |
| 5. | ಡಾ: ಖನೀಜ ಫಾತಿಮಾ ನಂ. 73-63 (ಹಳೆಯ) ಪಬ್ಲಿಕ್ ಗಾರ್ಡನ್ ಎದುರು ದರ್ಗಾಪುರ, ಬೀದರ್ ಜಿಲ್ಲೆ | 01.01.1970 | 1-ಎಫ್ | ಸಾರ್ವಜನಿಕ ಆಸ್ಪತ್ರೆ ಬಸವನ ಬಾಗೇವಾಡಿ ಬಿಜಾಪುರ ಜಿಲ್ಲೆ. |

**ಸಿ. ಎಸ್. ಜಗದೀಶಯ್ಯ**

ಪಿ.ಆರ್.157 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಾರ್ಮಿಕ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಕಾಇ 14 ಕಾಬಾಸೇ 2004 ಬೆಂಗಳೂರು, ದಿನಾಂಕ: 17ನೇ ಜನವರಿ 2005**

1965ರ ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆ, 1965 ಸೆಕ್ಷನ್ 13ರಲ್ಲಿ (1965ರ ಕಾಯ್ದೆ ಸಂಖ್ಯೆ: 15) ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದೆ ಇದೇ ಕಾಯ್ದೆ ಅಡಿ ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಹೊರಡಿಸಿದ ಎಲ್ಲಾ ಸರ್ಕಾರಿ ಅಧಿಸೂಚನೆಗಳನ್ನು ರದ್ದುಗೊಳಿಸಿ ಕರ್ನಾಟಕ ಸರ್ಕಾರವು ಸೆಕ್ಷನ್ 13(1)ರಲ್ಲಿನ ಉದ್ದೇಶಗಳಿಗಾಗಿ ಈ ಕೆಳಗಿನ ಕೋಷ್ಟಕದ 2ನೇ ಅಂಕಣಗಳಲ್ಲಿ

ನಮೂದಿಸಿದ ಅಧಿಕಾರಿಗಳನ್ನು ಕಾರ್ಖಾನೆ ಕಾಯ್ದೆ, 1948ರ ಕಲಂ 2 (ಎಂ)ರ ಅಡಿಯಲ್ಲಿ ನೋಂದಾಯಿತ ಕಾರ್ಖಾನೆಗಳಿಗೆ ಸಂಬಂಧಿಸಿದಂತೆ ಪರಿವೀಕ್ಷಕರುಗಳನ್ನಾಗಿ ಈ ಮೂಲಕ ನೇಮಕ ಮಾಡಲಾಗಿದೆ ಮತ್ತು ಕೋಷ್ಟಕದ 3ನೇ ಅಂಕಣದಲ್ಲಿ ಸಂವಾದಿ ನಮೂನೆಗಳಲ್ಲಿರುವ ಸ್ಥಳೀಯ ಪರಿಮಿತಿಗಳನ್ನು ಮತ್ತು ಅವರು ತಮ್ಮ ಪ್ರಕಾರ್ಯವನ್ನು ಚಲಾಯಿಸಬಹುದಾದ ಸ್ಥಳೀಯ ಪರಿಮಿತಿಗಳೆಂದು ಗೊತ್ತುಪಡಿಸಲಾಗಿದೆ.

**ಕೋಷ್ಟಕ**

| ಕ್ರ.ಸಂ. | ಅಧಿಕಾರಿಗಳ ಪದನಾಮ | ನಿಯೋಜಿತ ಸ್ಥಳೀಯ ಕ್ಷೇತ್ರ ಪರಿಮಿತಿ |
|---|---|---|
| 1 | 2 | 3 |
| 1 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-1, ಬೆಂಗಳೂರು. | ಬೆಂಗಳೂರು ಮಹಾನಗರಪಾಲಿಕೆಯ ವಾರ್ಡ್ ಸಂ. 1 ರಿಂದ 09, 99, 100, ಪೀಣ್ಯ ಕೈಗಾರಿಕಾ ಪ್ರದೇಶ ಮೊದಲನೇ ಹಂತದ ವಾರ್ಡ್ ಸಂ. 11, ಮಹಾನಗರ ಪಾಲಿಕೆಯ ನಂತರ ರಾಷ್ಟ್ರೀಯ ಹೆದ್ದಾರಿ 4ರ ಬೆಂಗಳೂರು ಕಡೆಯಿಂದ ರಸ್ತೆಯ ಬಲಭಾಗ ನೆಲಮಂಗಲ ತಾಲ್ಲೂಕಿನ ಸರಹದ್ದಿನವರೆಗೆ ಹಾಗೂ ರಾಷ್ಟ್ರೀಯ ಹೆದ್ದಾರಿ-7ರ ಎಡ ಭಾಗದ ಬೆಂಗಳೂರಿನಿಂದ ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲ್ಲೂಕಿನ ಸರಹದ್ದಿನವರೆಗೆ ಯಲಹಂಕ ಕೈಗಾರಿಕಾ ಪ್ರದೇಶ ಹೊರತುಪಡಿಸಿ ಕ್ಷೇತ್ರ ಪರಿಮಿತಿ. |
| 2 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-2, ಬೆಂಗಳೂರು. | ಬೆಂಗಳೂರು ಮಹಾನಗರಪಾಲಿಕೆಯ ವಾರ್ಡ್ ಸಂ. 84, 86 ರಿಂದ 98 ಮತ್ತು ಮಹಾನಗರಪಾಲಿಕೆಯ ಸರಹದ್ದಿನ ನಂತರ ಬೆಂಗಳೂರು ಕಡೆಯಿಂದ ಹಳೇ ಮದ್ರಾಸ್ ರಸ್ತೆಯ ಬಲಭಾಗ ಮತ್ತು ವರ್ತೂರು ರಸ್ತೆಯ ಎಡಭಾಗದ ಹೊಸಕೋಟೆ ಮತ್ತು ಆನೇಕಲ್ ತಾಲ್ಲೂಕಿನ ಸರಹದ್ದಿನವರೆಗೆ, ಬಿದರಹಳ್ಳಿ ಹೋಬಳಿ ಹೊರತುಪಡಿಸಿದ, ಹೊಸಕೋಟೆ ತಾಲ್ಲೂಕಿನಲ್ಲಿ ಬೆಂಗಳೂರು ಕಡೆಯಿಂದ ಹಳೇ ಮದ್ರಾಸ್ ರಸ್ತೆಯ ಬಲಭಾಗದ ಕ್ಷೇತ್ರ ಪರಿಮಿತಿ. |
| 3 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-3, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 65, ಮಹಾನಗರ ಪಾಲಿಕೆಯ ಸರಹದ್ದಿನ ನಂತರ ಬೆಂಗಳೂರಿನ ಕಡೆಯಿಂದ ರಾಷ್ಟ್ರೀಯ ಹೆದ್ದಾರಿ 7ರ (ಹೊಸೂರು ರಸ್ತೆ) ಬಲಭಾಗದ ಮತ್ತು ಬನ್ನೇರುಘಟ್ಟ ರಸ್ತೆಯ ಎಡ ಭಾಗದ ಆನೇಕಲ್ ತಾಲ್ಲೂಕಿನ ಸರಹದ್ದಿನವರೆಗೆ ಮತ್ತು ಆನೇಕಲ್ ತಾಲ್ಲೂಕಿನ ಜಿಗಣಿ ಕೈಗಾರಿಕಾ ಪ್ರದೇಶದ ಕ್ಷೇತ್ರ ಪರಿಮಿತಿ. |
| 4 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-4, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 51 ರಿಂದ ಸಂ. 56, ಮಹಾನಗರ ಪಾಲಿಕೆ ಸರಹದ್ದಿನ ನಂತರ ಬನ್ನೇರುಘಟ್ಟ ರಸ್ತೆಯ ಬಲಭಾಗದ ಹಾಗೂ ಆನೇಕಲ್ ತಾಲ್ಲೂಕಿನ ಸರಹದ್ದಿನವರೆಗೆ ಮತ್ತು ಬೆಂಗಳೂರು ಮಹಾನಗರ ಪಾಲಿಕೆಯ ಸರಹದ್ದಿನ ನಂತರ ಮೈಸೂರು ರಸ್ತೆಯ ಎಡಭಾಗ ರಾಮನಗರ ತಾಲ್ಲೂಕಿನ ಸರಹದ್ದಿನವರೆಗೆ ಹಾಗೂ ಕನಕಪುರ ರಾಮನಗರ ಮತ್ತು ಚೆನ್ನಪಟ್ಟಣ (ಬೆಂಗಳೂರು ಗ್ರಾಮಾಂತರ) ಜಿಲ್ಲೆ ಕ್ಷೇತ್ರ ಪರಿಮಿತಿ. |
| 5 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-5, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 72 ರಿಂದ 75, 82, 83 ಮತ್ತು 85 ಹಾಗೂ ಬೆಂಗಳೂರು ಮಹಾನಗರ ಪಾಲಿಕೆಯ ಸರಹದ್ದಿನ ನಂತರ ಬಲಭಾಗದ ವರ್ತೂರು ರಸ್ತೆ ಹಾಗೂ ಎಡಭಾಗದ ಎನ್‌ಹೆಚ್-7 (ಹೊಸೂರು ರಸ್ತೆ) ರಸ್ತೆಯ ಆನೇಕಲ್ ಮತ್ತು ಹೊಸಕೋಟೆ ತಾಲ್ಲೂಕಿನ ಸರಹದ್ದಿನವರೆಗೆ ಹಾಗೂ ವೀರಸಂದ್ರ ಕೈಗಾರಿಕಾ ಪ್ರದೇಶ ಹಾಗೂ ಎಲೆಕ್ಟ್ರಾನಿಕ್ ಸಿಟಿ ಕ್ಷೇತ್ರ ಪರಿಮಿತಿ. |
| 6 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-6, ಬೆಂಗಳೂರು. | ಆನೇಕಲ್ ತಾಲ್ಲೂಕು ಎಲೆಕ್ಟ್ರಾನಿಕ್ ಸಿಟಿ ಜಿಗಣಿ ಮತ್ತು ವೀರಸಂದ್ರ ಕೈಗಾರಿಕಾ ಪ್ರದೇಶ ಹೊರತುಪಡಿಸಿದ ಬೆಂಗಳೂರು ನಗರ ಜಿಲ್ಲೆಯ ಪೂರ್ತಿ ಆನೇಕಲ್ ತಾಲ್ಲೂಕು ಕ್ಷೇತ್ರ ಪರಿಮಿತಿ. |
| 7 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-7, ಬೆಂಗಳೂರು. | ಜಾಲಹಳ್ಳಿ ವೃತ್ತದಿಂದ ನೆಲಮಂಗಲ ತನಕ ರಾಷ್ಟ್ರೀಯ ಹೆದ್ದಾರಿ-4ರ ಎಡ ಭಾಗ 100 ಅಡಿ ವರ್ತುಲ ರಸ್ತೆ ವಾರ್ಡ್ ಸಂ. 12ರ ಒಂದನೇ ಮುಖ್ಯರಸ್ತೆ, (ನಂದಿನಿ ಲೇಔಟ್) ಬಲಭಾಗ ಮತ್ತು ಮಾಗಡಿ ರಸ್ತೆಯ ಬಲಭಾಗ ಮಾಗಡಿ ತಾಲ್ಲೂಕಿನ ಸರಹದ್ದಿನವರೆಗೆ ಅಂದರೆ ಪೀಣ್ಯ ಕೈಗಾರಿಕಾ ಪ್ರದೇಶದ 2ನೇ 3ನೇ ಮತ್ತು 4ನೇ ಹಂತ ಬೆಂಗಳೂರು ವಿಭಾಗ-8ಕ್ಕೆ ಇರುವ ಕ್ಷೇತ್ರ ಪರಿಮಿತಿ ಹೊರತುಪಡಿಸಿದ ಮತ್ತು ಮಾಗಡಿ ತಾಲ್ಲೂಕಿನ ಮತ್ತು ದಾಸನಪುರ ಹೋಬಳಿಯ ಕ್ಷೇತ್ರ ಪರಿಮಿತಿ. |
| 8 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-8, ಬೆಂಗಳೂರು. | ಪೀಣ್ಯ ಇಂಡಸ್ಟ್ರಿಯಲ್ ಏರಿಯಾ, ಹಂತ-2, 3 ಮತ್ತು 4, 12ನೇ ಕ್ರಾಸ್, 4ನೇ ಫೇಸ್ ನವರೆಗೆ, ವಾರ್ಡ್ ಸಂ. 11ರಲ್ಲಿರುವ 3ನೇ ಫೇಸ್ (ಭಾಗಶ: ಕ್ಷೇತ್ರ ಪರಿಮಿತಿ ಸೇರಿ) ಮತ್ತು ಚೊಕ್ಕಸಂದ್ರ ವಿಲೇಜ್ ಒಳಗೊಂಡ ಕ್ಷೇತ್ರ ಪರಿಮಿತಿ. |
| 9 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-9, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 22 ರಿಂದ 31, 44, 46, 76 ರಿಂದ 81 ಮತ್ತು ವಾರ್ಡ್ ಸಂ. 21ರ ರಾಜಾಜಿನಗರ ಇಂಡಸ್ಟ್ರಿಯಲ್ ಎಸ್ಟೇಟ್. |
| 10 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-10, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 41-43, 45, 47-50, 57-64 ಮತ್ತು 66 ರಿಂದ 71ರ ಕ್ಷೇತ್ರ ಪರಿಮಿತಿ. |

| 1 | 2 | 3 |
|---|---|---|
| 11 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-11, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 10 ರಿಂದ 12 ರಿಂದ 14 ಮತ್ತು ಎನ್‌ಹೆಚ್-4 ರಸ್ತೆಯ ಎಡಭಾಗ ಜಾಲಹಳ್ಳಿ ವೃತ್ತದವರೆಗೆ ಹಾಗೂ ಪೀಣ್ಯ ಇಂಡಸ್ಟ್ರಿಯಲ್ ಏರಿಯಾ 100 ಅಡಿ ರಸ್ತೆಯ ಎಡಭಾಗ ಬಿ.ಡಬ್ಲ್ಯೂ.ಎಸ್.ಎಸ್. ಬಿ ರವರೆಗೆ ಇರುವ ಕ್ಷೇತ್ರ ಪರಿಮಿತಿ. |
| 12 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-12, ಬೆಂಗಳೂರು. | ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂ. 15 ರಿಂದ 20 ಮತ್ತು 32 ರಿಂದ 40 ಹಾಗೂ ವಾರ್ಡ್ ಸಂ. 21 ರಲ್ಲಿ ರಾಜಾಜಿನಗರ ಕೈಗಾರಿಕಾ ಪ್ರದೇಶ ಹೊರತುಪಡಿಸಿ ಉಳಿದ ಭಾಗದ ಮತ್ತು ಮಹಾನಗರ ಪಾಲಿಕೆಯ ಸರಹದ್ದಿನ ನಂತರ ನಗರದ ಕಡೆಯಿಂದ ಮಾಗಡಿ ರಸ್ತೆ ಎಡಭಾಗಕ್ಕೆ ಮಾಗಡಿ ತಾಲ್ಲೂಕಿನ ಸರಹದ್ದಿನವರೆಗೆ ಹಾಗೂ ಮಹಾನಗರ ಪಾಲಿಕೆ ಸರಹದ್ದಿನ ನಂತರ ನಗರದ ಕಡೆಯಿಂದ ಮೈಸೂರು ರಸ್ತೆಯ ಬಲಭಾಗಕ್ಕೆ ರಾಮನಗರಂ ತಾಲ್ಲೂಕಿನ ಸರಹದ್ದಿನವರೆಗಿನ ಕ್ಷೇತ್ರ ಪರಿಮಿತಿ. |
| 13 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-13, ಬೆಂಗಳೂರು. | ಕೋಲಾರ ಜಿಲ್ಲೆ ಮತ್ತು ಹೊಸಕೋಟೆ ತಾಲ್ಲೂಕಿನ ನ್ಯಾಷನಲ್ ಹೈವೇ 4ರ ಬೆಂಗಳೂರು ಸರಹದ್ದಿನಿಂದ ಕೋಲಾರ ಜಿಲ್ಲೆ ಸರಹದ್ದಿನವರೆಗಿನ ಬಲಭಾಗವನ್ನು ಹೊರತುಪಡಿಸಿದ ಹೊಸಕೋಟೆ ತಾಲ್ಲೂಕು ಮತ್ತು ಬೆಂಗಳೂರು ತಾಲ್ಲೂಕಿನ ಬಿದರಹಳ್ಳಿ ಹೋಬಳಿ ಕ್ಷೇತ್ರ ಪರಿಮಿತಿ. |
| 14 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-14, ಬೆಂಗಳೂರು. | ಮಹಾನಗರ ಪಾಲಿಕೆ ಸರಹದ್ದಿನ ನಂತರ ಎಡಭಾಗದ ಹಳೇ ಮದ್ರಾಸ್ ರಸ್ತೆ ಮತ್ತು ಬಲಭಾಗದ ಬಳ್ಳಾರಿ ರಸ್ತೆ ಹೊಸಕೋಟೆ ಮತ್ತು ದೇವನಹಳ್ಳಿ ತಾಲ್ಲೂಕುಗಳ ಸರಹದ್ದಿನವರೆಗೆ ಯಲಹಂಕ ಇಂಡಸ್ಟ್ರಿಯಲ್ ಏರಿಯಾ ಮತ್ತು ದಾಸನಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕುಗಳನ್ನು ಒಳಗೊಂಡು ಮತ್ತು ದೊಡ್ಡಬಳ್ಳಾಪುರ, ದೇವನಹಳ್ಳಿ ಮತ್ತು ನೆಲಮಂಗಲ ಬೆಂಗಳೂರು (ಗ್ರಾ) ಬಿದರಹಳ್ಳಿ ಹೋಬಳಿ ಹೊರತುಪಡಿಸಿ ಕಾರ್ಯಕ್ಷೇತ್ರ. |
| 15 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-1, ಮೈಸೂರು. | ಕೊಡಗು ಮತ್ತು ಮೈಸೂರು ಜಿಲ್ಲೆಗಳು ಇದರಲ್ಲಿ ಟಿ. ನರಸೀಪುರ, ಮೈಸೂರು ಜಿಲ್ಲೆ ಹೊರತುಪಡಿಸಿದೆ. ಮತ್ತು ಬಲಭಾಗದ ಮೈಸೂರು ನಂಜನಗೂಡು ರೈಲ್ವೇ ಟ್ರಾಕ್ ರೈಲ್ವೇ ಸ್ಟೇಷನ್ ನಿಂದ ನಂಜನಗೂಡು ಸರಹದ್ದಿನವರೆಗೆ ಮತ್ತು ಬಲಭಾಗದ ಕೆ.ಆರ್.ಎಸ್. ರಸ್ತೆ ದಾಸಪ್ಪ ಸರ್ಕಲ್‌ನಿಂದ ಮಂಡ್ಯ ಜಿಲ್ಲೆಯ ಸರಹದ್ದಿನವರೆಗೆ ಕ್ಷೇತ್ರ ಪರಿಮಿತಿ. |
| 16 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-2, ಮೈಸೂರು | ಮಂಡ್ಯ, ಹಾಸನ, ಚಾಮರಾಜನಗರ ಮತ್ತು ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ ಮತ್ತು ಮೈಸೂರು ನಂಜನಗೂಡು ರೈಲ್ವೇ ಟ್ರಾಕ್‌ನ ಎಡಭಾಗ ರೈಲ್ವೇ ಸ್ಟೇಷನ್ ನಿಂದ ನಂಜನಗೂಡು ಸರಹದ್ದಿನವರೆಗೆ ಮತ್ತು ಕೆಆರ್‌ಎಸ್ ರಸ್ತೆಯ ಬಲಭಾಗ, ದಾಸಪ್ಪ ಸರ್ಕಲ್ ನಿಂದ ಮಂಡ್ಯ ಸರಹದ್ದಿನವರೆಗೆ |
| 17 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-1, ಮಂಗಳೂರು (ಯೋಜನಾ ಹುದ್ದೆ). | ದಕ್ಷಿಣ ಕನ್ನಡ ಜಿಲ್ಲೆ ಇದರಲ್ಲಿ ಎಡಭಾಗದ ಮಂಗಳೂರಿನ ನ್ಯಾಷನಲ್ ಹೈವೇ ಸಂ. 7 ರಸ್ತೆ, ಉಡುಪಿ ಜಿಲ್ಲೆಯ ಸರಹದ್ದಿನವರೆಗೆ ಹೊರತುಪಡಿಸಿದೆ. ಹಾಗೂ ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿ ಒಳಗೊಂಡ ಕ್ಷೇತ್ರ ಪರಿಮಿತಿ. |
| 18 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-2, ಮಂಗಳೂರು. | ಉಡುಪಿ ಜಿಲ್ಲೆ ಮತ್ತು ಎಡಭಾಗ ಮಂಗಳೂರು ತಾಲ್ಲೂಕಿನ ನ್ಯಾಷನಲ್ ಹೈವೇ-7 ರಸ್ತೆ, ಉಡುಪಿ ಜಿಲ್ಲೆಯ ಸರಹದ್ದಿನವರೆಗೆ ಮತ್ತು ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿ ಒಳಗೊಂಡಂತೆ. |
| 19 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-1, ಹುಬ್ಬಳ್ಳಿ. | ಧಾರವಾಡ ಜಿಲ್ಲೆ, ಉತ್ತರ ಕನ್ನಡ ಮತ್ತು ಬಲಭಾಗದ ಹುಬ್ಬಳ್ಳಿ ತಾಲ್ಲೂಕಿನ ಬೆಂಗಳೂರು ಪುಣೆ ನ್ಯಾಷನಲ್ ಹೈವೇ ವ್ಯಾಪ್ತಿಯನ್ನು ಹೊರತುಪಡಿಸಿದೆ. ಹೆಚ್‌ಡಿಎಂಸಿ ಏರಿಯಾ ಮತ್ತು ತರಿಹಾಳ್ ಇಂಡಸ್ಟ್ರಿಯಲ್ ಏರಿಯಾ, ಹುಬ್ಬಳ್ಳಿ ತಾಲ್ಲೂಕು ಕ್ಷೇತ್ರ ಪರಿಮಿತಿ. |
| 20 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-2, ಹುಬ್ಬಳ್ಳಿ. | ಗದಗ್ ಹಾವೇರಿ ಜಿಲ್ಲೆಗಳು ಮತ್ತು ಬಾಗಲಕೋಟೆ ಹಾಗೂ ಹುಬ್ಬಳ್ಳಿ ತಾಲ್ಲೂಕಿನ ಬಲಭಾಗದ ಬೆಂಗಳೂರು ಪುಣೆ ನ್ಯಾಷನಲ್ ಹೈವೇ, ಹೆಚ್.ಡಿ.ಎಂ.ಸಿ. ಏರಿಯಾ ಮತ್ತು ತರಿಹಾಳ್ ಇಂಡಸ್ಟ್ರಿಯಲ್ ಏರಿಯಾ, ಹುಬ್ಬಳ್ಳಿ ತಾಲ್ಲೂಕು ಕ್ಷೇತ್ರ ಪರಿಮಿತಿ. |
| 21 | ಕಾರ್ಖಾನೆಗಳ ಉಪ ನಿರ್ದೇಶಕರು, ವಿಭಾಗ-1, ಬೆಳಗಾಂ (ಯೋಜನಾ ಹುದ್ದೆ). | ಸೌದತ್ತಿ, ಅಥಣಿ, ಚಿಕ್ಕೋಡಿ ತಾಲ್ಲೂಕುಗಳು ಬೆಳಗಾಂ ಜಿಲ್ಲೆಯ ರಾಯಭಾಗ ಮತ್ತು ಬೆಳಗಾಂ ತಾಲ್ಲೂಕಿನ ಎಡಭಾಗದ ಎನ್‌ಹೆಚ್-4ಎ ರಸ್ತೆಯು ಖಾನಾಪುರ ತಾಲ್ಲೂಕು ಸರಹದ್ದಿನಿಂದ ಎನ್‌ಹೆಚ್-4 ಜಂಕ್ಷನ್ (ಬೆಂಗಳೂರು ಪುಣೆ ಹೈವೇ) ಕಾಲೇಜು ರಸ್ತೆ ಮಾರ್ಗ ಚೆನ್ನಮ್ಮ ವೃತ್ತ ಮೂಲಕ ಜಿ. ಎನ್. ಮೆಡಿಕಲ್ ಕಾಲೇಜು ರಸ್ತೆ, ಹುಕ್ಕೇರಿ ತಾಲ್ಲೂಕಿನ ಸರಹದ್ದಿನವರೆಗೆ ಕ್ಷೇತ್ರ ಪರಿಮಿತಿ. |
| 22 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ-2, ಬೆಳಗಾಂ. | ಖಾನಾಪುರ, ಗೋಕಾಕ್, ಬೈಲಹೊಂಗಲ, ರಾಮದುರ್ಗ ತಾಲ್ಲೂಕುಗಳು ಮತ್ತು ಬೆಳಗಾಂ ಜಿಲ್ಲೆಯ ಹುಕ್ಕೇರಿ ಮತ್ತು ಬೆಳಗಾಂ ತಾಲ್ಲೂಕಿನ ಸ್ವಲ್ಪ ಭಾಗ ಖಾನಾಪುರ ತಾಲ್ಲೂಕಿನ ಸರಹದ್ದಿನ ಬಲಭಾಗ ಒಳಗೊಂಡಂತೆ ಬೆಳಗಾಂ ಜಿಲ್ಲೆ ಮುಖಾಂತರ ಕಾಲೇಜು ರಸ್ತೆ, ಚೆನ್ನಮ್ಮ ವೃತ್ತ ದಿಂದ ಕೆ.ಎನ್. ಮೆಡಿಕಲ್ ಕಾಜೇಜುವರೆಗೆ, ಎನ್‌ಹೆಚ್-4 ಮುಖಾಂತರ ಮಹಾನಗರ ಪಾಲಿಕೆ ಮತ್ತು ಬೆಂಗಳೂರು ಪುಣೆ ರಸ್ತೆಯವರೆಗೆ ಹುಕ್ಕೇರಿ ತಾಲ್ಲೂಕಿನ ಸರಹದ್ದಿನವರೆಗೆ ಮತ್ತು ಬಿಜಾಪುರ ಜಿಲ್ಲೆ ಕ್ಷೇತ್ರ ಪರಿಮಿತಿ. |

| 1 | 2 | 3 |
|---|---|---|
| 23 | ಕಾರ್ಖಾನೆಗಳ ಉಪ ನಿರ್ದೇಶಕರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. | ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳು ಕ್ಷೇತ್ರ ಪರಿಮಿತಿ. |
| 24 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಬಳ್ಳಾರಿ ವಿಭಾಗ, ಬಳ್ಳಾರಿ. | ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳು ಕ್ಷೇತ್ರ ಪರಿಮಿತಿ. |
| 25 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ತುಮಕೂರು ವಿಭಾಗ, ತುಮಕೂರು. | ತುಮಕೂರು ಜಿಲ್ಲೆ ಕ್ಷೇತ್ರ ಪರಿಮಿತಿ |
| 26 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ಶಿವಮೊಗ್ಗ ವಿಭಾಗ, ಶಿವಮೊಗ್ಗ. | ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳು ಕ್ಷೇತ್ರ ಪರಿಮಿತಿ |
| 27 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ. | ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳು ಕ್ಷೇತ್ರ ಪರಿಮಿತಿ. |
| 28 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ರಾಯಚೂರು ವಿಭಾಗ, ರಾಯಚೂರು. | ರಾಯಚೂರು ಜಿಲ್ಲೆ ಕ್ಷೇತ್ರ ಪರಿಮಿತಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.158

**ವಿಮಲಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು).

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಪತ್ರ ನಂ: ಎಲ್‌ಆರ್‌ಎಫ್:ಸಿಆರ್:109/04-05: ಬೆಂಗಳೂರು ದಿನಾಂಕ: 1ನೇ ಜನವರಿ 2005

**ವಿಷಯ :** ಸಾಯಿನಾಥ ಎಜ್ಯುಕೇಷನ್ ಟ್ರಸ್ಟ್ (ರಿ), 19ನೇ ಕ್ರಾಸ್, 7ನೇ ಮುಖ್ಯರಸ್ತೆ, ಬಿ.ಟಿ.ಎಂ., 2ನೇ ಹಂತ, ಎನ್.ಎಸ್. ಪಾಳ್ಯ, ಬೆಂಗಳೂರು-76, ರವರು ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಕರ್ಪೂರು ಗ್ರಾಮದ ಸ.ನಂ. 60, 63, 171, 62, 55 ಮತ್ತು 73/ಪಿ5 ರಲ್ಲಿ ಒಟ್ಟು 10-23 ಎಕರೆ: ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸಾಯಿನಾಥ ಎಜ್ಯುಕೇಷನ್ ಟ್ರಸ್ಟ್ (ರಿ), 19ನೇ ಕ್ರಾಸ್, 7ನೇ ಮುಖ್ಯರಸ್ತೆ, ಬಿ.ಟಿ.ಎಂ., 2ನೇ ಹಂತ, ಎನ್.ಎಸ್. ಪಾಳ್ಯ, ಬೆಂಗಳೂರು-76, ರವರು ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಕರ್ಪೂರು ಗ್ರಾಮದ ಸ.ನಂ. 60, 63, 171, 62, 55 ಮತ್ತು 73/ಪಿ5 ರಲ್ಲಿ ಒಟ್ಟು 10-23 ಎಕರೆ: ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ನಂ: ಎಲ್‌ಆರ್‌ಎಫ್: ಸಿಆರ್ 32/04-05 ದಿನಾಂಕ: 27.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 60, 63, 171, 62, 55 ಮತ್ತು 73/ಪಿ5ರಲ್ಲಿ ಒಟ್ಟು 10.23 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ, ಗಾಂಧಿನಗರ, ಉಪನೋಂದಣಾ ಕಛೇರಿಯಲ್ಲಿ ದಿನಾಂಕ:20.2.2002 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ, ಕರ್ಪೂರು ಗ್ರಾಮದ ಸ.ನಂ.60, 63, 171,62,55 ಮತ್ತು 73/ಪಿ5 ರಲ್ಲಿ ಒಟ್ಟು 10-23 ಎಕರೆ:ಗುಂಟೆ ಜಮೀನನ್ನು ಸಾಯಿನಾಥ ಎಜ್ಯುಕೇಷನಲ್ ಟ್ರಸ್ಟ್ (ರಿ), 19ನೇ ಕ್ರಾಸ್, 7ನೇ ಮುಖ್ಯರಸ್ತೆ, ಬಿ.ಟಿ.ಎಂ., 2ನೇ ಹಂತ, ಎನ್.ಎಸ್.ಪಾಳ್ಯ, ಬೆಂಗಳೂರು-76 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ

ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.160

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ನಂ: ಎಲ್‌ಆರ್‌ಎಫ್:ಸಿಆರ್:111/04-05: ಬೆಂಗಳೂರು ದಿನಾಂಕ: 4ನೇ ಜನವರಿ 2005**

**ವಿಷಯ :** ಎಬೇನ್-ಎಜೇರ್ ಎಜ್ಯುಕೇಷನಲ್ ಚಾರಿಟೇಬಲ್ ಟ್ರಸ್ಟ್ (ರಿ), ನಂ. 37, ಕೆ.ಸಿ.ಲೇಔಟ್, ಸೆಂಟ್ ಥಾಮಸ್ ಟೌನ್ ಅಂಚೆ, ಬೆಂಗಳೂರು 84 ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬೈರತಿ ಗ್ರಾಮದ ಸ.ನಂ. 19 ರಲ್ಲಿ ಒಟ್ಟು 4-13 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಎಬೇನ್-ಎಜೇರ್ ಎಜ್ಯುಕೇಷನಲ್ ಚಾರಿಟೇಬಲ್ ಟ್ರಸ್ಟ್ (ರಿ), ನಂ. 37, ಕೆ.ಸಿ.ಲೇಔಟ್, ಸೆಂಟ್ ಥಾಮಸ್ ಟೌನ್ ಅಂಚೆ, ಬೆಂಗಳೂರು 84 ರವರು ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬೈರತಿ ಗ್ರಾಮದ ಸ.ನಂ. 19 ರಲ್ಲಿ ಒಟ್ಟು 4-13 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ನಂ: ಎಲ್‌ಆರ್‌ಎಫ್:ಸಿಆರ್ 13/04-05 ದಿನಾಂಕ: 3.1.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 19ರಲ್ಲಿ ಒಟ್ಟು 4-13 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೊಂದಣಾಧಿಕಾರಿಗಳ ಕಚೇರಿ, ಶಿವಾಜಿನಗರ, ಉಪನೋಂದಣಾ ಕಚೇರಿಯಲ್ಲಿ ಬೆಂಗಳೂರು ಈ ಕಚೇರಿಯಲ್ಲಿ ದಿನಾಂಕ:3.12.2001 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬೈರತಿ ಗ್ರಾಮದ ಸ.ನಂ.19ರಲ್ಲಿ ಒಟ್ಟು 4-13 ಎಕರೆ:ಗುಂಟೆ ಜಮೀನನ್ನು ಎಬೇನ್-ಎಜೇರ್ ಎಜ್ಯುಕೇಷನಲ್ ಚಾರಿಟೇಬಲ್ ಟ್ರಸ್ಟ್ (ರಿ), ನಂ.37 ಕೆ.ಸಿ.ಲೇಔಟ್ ಸೆಂಟ್ ಥಾಮಸ್ ಟೌನ್ ಅಂಚೆ, ಬೆಂಗಳೂರು-84 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.161 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್**
**ಬಿಜಾಪುರ ಜಿಲ್ಲೆ, ಬಿಜಾಪುರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು :** ಶ್ರೀ ಕೆ. ಆರ್. ಗೌಡ್ರ ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಬಿಜಾಪುರ ಜಿಲ್ಲೆ, ಬಿಜಾಪುರ.

**ಫಿರ್ಯಾದುದಾರರು :** ಶ್ರೀ ಹೆಚ್. ಜಿ. ಕುಲಕರ್ಣಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಬಿಜಾಪುರ.

**ವಿರುದ್ಧ**

**ಆರೋಪಿತರು :**
1. ಅರವಿಂದ ತಂದಿ ಕೃಷ್ಣಾಗೌಡ ಪಾಟೀಲ ಸಾ: ಜನವಾಡ ತಾ: ಜಮಖಂಡಿ, ಜಿ: ಬಾಗಲಕೋಟೆ
2. ಸಂಗಯ್ಯ ತಂದಿ ಕಲ್ಲಯ್ಯ ಪೂಜಾರಿ ಸಾ: ಜನವಾಡ ತಾ: ಜಮಖಂಡಿ, ಜಿ: ಬಾಗಲಕೋಟೆ
3. ಫಜಲಅಹಮ್ಮದ್ ಮೊಹಮ್ಮದ ಯು ಸಯಫ ತಹಶೀಲದಾರ ನಂ. 95 ಮುಲ್ಲಾಗಲ್ಲಿ ಹುಬ್ಬಳ್ಳಿ (ವಾಹನದ ಮಾಲೀಕರು).

**ಪ್ರಸ್ತಾವನೆ:**

ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ಉಪ ವಿಭಾಗ ಇವರು ದಿನಾಂಕ: 08.06.2004 ರಂದು ರಾತ್ರಿ 8-00 ಗಂಟೆಯ ಸಮಯದಲ್ಲಿ ಬಿಜಾಪುರ ಶಹರದ ಇಂಡಿ ರಸ್ತೆಯಲ್ಲಿ ಇರುವ ಮಹಾಶಕ್ತಿ ದೇವಾಲಯ ಎದುರುಗಡೆ ಇರುವ ಮುಳವಾಡ ಡಾಕ್ಟರ್ ದವಾಖಾನೆ ಹತ್ತಿರ ಅಕ್ರಮವಾಗಿ 172.800 ಲೀಟರ್ ಕರಕೊಡದ ನಕಲಿ ಮದ್ಯವನ್ನು ಮಾರುತಿ 800 ಕಾರ್ ನಂ. ಕೆಎ-22:ಎಂ:4409 ರಲ್ಲಿ ಸಾಗಾಣಿಕೆ ಮಾಡುತ್ತಿರುವುದನ್ನು ತಡೆದು ವಾಹನವನ್ನು ತಪಾಸಿಸಲಾಗಿ ವಾಹನದ ಒಳಗಡೆ ನಕಲಿ ಮದ್ಯ ಬಾಟ್ಲಿಗಳನ್ನು ತುಂಬಿದ 20 ರಟ್ಟಿನ ಪೆಟ್ಟಿಗೆಗಳು ಇದ್ದುದನ್ನು ಪತ್ತೆ ಹಚ್ಚಿ ವಾಹನದಲ್ಲಿ ಇದ್ದ ಇಬ್ಬರು ಆರೋಪಿತರಾದ (1) ಅರವಿಂದ ತಂದಿ ಕೃಷ್ಣಾಗೌಡ ಪಾಟೀಲ (2) ಸಂಗಯ್ಯ ತಂದಿ ಕಲ್ಲಯ್ಯ ಪೂಜಾರಿ ಇವರುಗಳು ಇದ್ದು ಸದರಿ ಮದ್ಯದ ಬಾಟ್ಲಿಗಳನ್ನು ಸಾಗಾಟ ಮಾಡಲು ಪರ್ಮಿಟ್‌ವ ಲೈಸನ್ಸ್ ವಗೈರೆ ಇದೆಯೇ ಎಂದು ಸದರಿಯವರನ್ನು ಕೇಳಲಾಗಿ ಅವರು ಸಮರ್ಪಕವಾಗಿ ಉತ್ತರ ನೀಡಲಿಲ್ಲಾ ವಾಹನದ ಒಳಗಡೆ ಇದ್ದ ನಕಲಿ ಮದ್ಯದ ಬಾಟ್ಲಿಗಳನ್ನು ಎಣಿಕೆಮಾಡಿ ನೋಡಲಾಗಿ ಈ ಕೆಳಗಿನಂತೆ ಇರುತ್ತದೆ.

| | | | |
|---|---|---|---|
| 1) | 180 ಮಿಲಿಯ ಓರಿಜನಲ್ ಚಾಯಿಸ್ ಡಿಲಕ್ಸ್ ವಿಸ್ಕಿಯ | - | 480 ಬಾಟ್ಲಿಗಳು |
| 2) | 180 ಮಿಲಿಯ ಓಲ್ಡಮಂಕ್ ತ್ರಿಎಕ್ಸ್‌ರಮ್ | - | 480 ಬಾಟ್ಲಿಗಳು |
| | ಒಟ್ಟು | - | 960 ಬಾಟ್ಲಿಗಳು |

ಸದರಿ ಮದ್ಯವು ಅಕ್ರಮವಾಗಿ ಸರ್ಕಾರಕ್ಕೆ ಕರಕೊಡದೆ ಸಾಗಾಟ ಮಾಡುತ್ತಿರುವುದು ಖಚಿತ ಪಟ್ಟಿದ್ದರಿಂದ ಸದರಿ ಮದ್ಯ ಹಾಗೂ ವಾಹನವನ್ನು ಜಪ್ತು ಮಾಡಿ ಮತ್ತು ಆರೋಪಿಯನ್ನು ಬಂಧಿಸಿ ವಶಕ್ಕೆ ತೆಗೆದುಕೊಳ್ಳಲಾಯಿತು. ನಂತರ ಅ.ನಂ.1 ಮತ್ತು 2 ಪೆಟ್ಟಿಗೆಗಳಿಂದ ತಲಾ 3 ಬಾಟ್ಲಿಗಳಂತೆ ಒಟ್ಟು 6 ಬಾಟ್ಲಿಗಳನ್ನು ರಸಾಯನಿಕ ಪರೀಕ್ಷೆಗೋಸ್ಕರ ಮಾದರಿಯಾಗಿ ತೆಗೆದು ಪಂಚರ ಸಮಕ್ಷಮ ಶೀಲುಮಾಡಿ ಸಹಿ ಇರುವ ಚೀಟಿಗಳನ್ನು ಅಂಟಿಸಿ ಪಂಚನಾಮೆಯನ್ನು ಬರೆದು 1 ಮತ್ತು 2ನೇ ಆರೋಪಿಯನ್ನು ನ್ಯಾಯಾಲಯದ ಮುಂದೆ ಹಾಜರಪಡಿಸಿರುತ್ತಾರೆ. ಫಿರ್ಯಾದುದಾರರು ಆರೋಪಿತರ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 11 ಮತ್ತು 12ರ ಪ್ರಕಾರ ಅಪರಾಧವಾಗಿದ್ದು 32,34,38, (ಎ) ಪ್ರಕಾರ ಶಿಕ್ಷಾರ್ಹವಾಗಿದ್ದರಿಂದ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ ಇವರು ಗುನ್ನೆ ನಂ. 41/2003-04 ದಿನಾಂಕ: 08.06.2004 ರಂದು ದಾಖಲಿಸಿರುತ್ತಾರೆ. ನಂತರ ವಾಹನ ಮುದ್ದೇಮಾಲು ಹಾಗೂ ಕಾಗದ ಪತ್ರಗಳೊಂದಿಗೆ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ನಗರ ಉಪವಲಯ ಇವರಿಗೆ ತನಿಖೆಗಾಗಿ ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ನಗರ ಉಪ ವಲಯ ಇವರು ರಸಾಯನಿಕ ಪರೀಕ್ಷೆಗೆ ತೆಗೆದು ಮಾದರಿಗಳನ್ನು ರಸಾಯನಿಕ ತಜ್ಞರಿಗೆ ಕಳಿಸಿ ವರದಿಪಡೆದಿರುತ್ತಾರೆ. ಸದರಿ ವರದಿಯಲ್ಲಿ ಒರಿಜನಲ್ ಚಾಯ್ಸ್ ವಿಸ್ಕಿಯ ಮಾದರಿಯಲ್ಲಿ ಮದ್ಯಸಾರದ ಅಂಶವು 39.3* ಯುಪಿ ಇದ್ದು ಮತ್ತು ಓಲ್ಡಮಂಕ್ ತ್ರಿಎಕ್ಸ್ ರಮ್ ಮಾದರಿಯಲ್ಲಿ ಮದ್ಯಸಾರದ ಅಂಶವು 40.2* ಯುಪಿ ಇದ್ದು ಸದರಿ ಮದ್ಯದ ಬಾಟ್ಲಿಗಳು ನಕಲಿ ಮದ್ಯ ಬಾಟ್ಲಿಗಳಾಗಿರುತ್ತವೆ. ಎಂದು ರಸಾಯನಿಕ ತಜ್ಞರು ದೃಢಪಡಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ನಕಲಿ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಬಗ್ಗೆ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರಿಸಲಾಯಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಳಗಾಂವ ಜಿಲ್ಲೆ ಇವರಿಗೆ ಪತ್ರವನ್ನು ಬರೆದು ಬಿ-ಎಕ್ಸ್‌ಟ್ರಾಕ್ಟ್ ವಹಿಯನ್ನು ನೀಡಲು ತಿಳಿಸಲಾಯಿತು. ಈ ವಾಹನವನ್ನು ಧಾರವಾಡಕ್ಕೆ ವರ್ಗಾಯಿಸಲಾಗಿದೆ ಅಂತಾ ಪತ್ರ ಬರೆದು ತಿಳಿಸಿದರು ನಂತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಧಾರವಾಡ ಇವರಿಗೆ ದಿನಾಂಕ: 15.10.2004 ರಂದು ಪತ್ರ ಬರೆಯಲಾಯಿತು. ದಿನಾಂಕ: 26.10.2004 ರಂದು ಧಾರವಾಡದಿಂದ ಬಿ-ಎಕ್ಸ್‌ಟ್ರ್ಯಾಕ್ಟ್ ಪಡೆದು ಅದರ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಫಜಲ್‌ಅಹಮ್ಮದ್ ಮಹಮ್ಮದಯುಸಫ್ ತಹಶೀಲದಾರ ನಂ. 95, ಮುಲ್ಲಾಗಲ್ಲಿ ಹುಬ್ಬಳ್ಳಿ ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ವಾಹನದ ಮಾಲೀಕರಿಗೆ ಮತ್ತು ಆರೋಪಿತರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ದಿನಾಂಕ: 30.10.2004 ರಂದು ನೋಂದಾಯಿತ ಅಂಚೆಯ ಮೂಲಕ ರವಾನಿಸಿದ್ದು ದಿನಾಂಕ: 3.11.2004 ರಂದು ಜಾರಿಯಾಗಿ ಸ್ವೀಕೃತಿ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ನಗರ ಉಪವಲಯ ಇವರು ವರದಿ ಸಲ್ಲಿಸಿ ಗುನ್ಹೆಯು ದಾಖಲಾತಿಯಾಗಿ ಏಳು ತಿಂಗಳು ಕಳೆದರೂ ವಶಪಡಿಸಿಕೊಂಡ ವಾಹನ ತಮ್ಮದೆಂದು ಹೇಳಿಕೊಂಡು ಯಾವುದೇ ವ್ಯಕ್ತಿಯು ವಿಚಾರಿಸಲು ಈ ಉಪ ವಲಯಕ್ಕೆ ಬಂದಿರುವುದಿಲ್ಲಾ ಸದರಿ ವಾಹನವು ಮಳೆ, ಗಾಳಿ, ಬಿಸಿಲಿಗೆ ಸಿಕ್ಕಿ ಹಾಳಾಗುವ ಮತ್ತು ಹವಾಮಾನ ವೈಪರೀತ್ಯಗಳಿಗೆ ದಿನೇ ದಿನೇ ತನ್ನ ಗುಣಮಟ್ಟವನ್ನು ಕಡಿಮೆಯಾಗುವುದರಿಂದಾ ಸರ್ಕಾರದ ಆದಾಯದಹಿತದೃಷ್ಟಿಯಿಂದಾ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಿಳಿಸಿರುತ್ತಾರೆ.

ವಾಹನದ ಮಾಲೀಕರಿಗೆ ನೀಡಿದ ನೋಟೀಸಿನಲ್ಲಿ ನಿಮ್ಮ ಹೇಳಿಕೆ ಏನಾದರೂ ಇದ್ದರೆ 15 ದಿನಗಳ ಒಳಗಾಗಿ ಸಲ್ಲಿಸಲು ತಿಳಿಸಲಾಯಿತು. ಒಂದು ವೇಳೆ ನಿಮ್ಮ ಹೇಳಿಕೆ ಸಲ್ಲಿಸದಿದ್ದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ತಿಳಿದು ಏಕಪಕ್ಷೀಯವಾಗಿ ನಿರ್ಣಯವನ್ನು ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಯಿತು. ಪ್ರಕರಣ ದಾಖಲಾಗಿ ಏಳು ತಿಂಗಳು ಕಳೆದರೂ ಪ್ರಕರಣದಲ್ಲಿ ಜಪ್ತಾದ ಮಾರುತಿ 800 ಕಾರು ನಂ. ಕೆಎ-22:ಎಂ:4409 ಮತ್ತು 172.800 ಲೀ ಮದ್ಯವು ತಮ್ಮದೆಂದು ಹೇಳಿಕೊಂಡು ಈ ಪ್ರಾಧಿಕಾರದ ಮುಂದೆ ಯಾರು ಹಾಜರ ಆಗಿರುವುದಿಲ್ಲಾ ಮತ್ತು ದಾಖಲಾತಿಗಳನ್ನು ಸಹ ಸಲ್ಲಿಸಿರುವುದಿಲ್ಲಾ. ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕುರಿತು ಮುಂದಿನ ವಿಚಾರಣೆಯನ್ನು ಕೈಗೊಂಡಿದ್ದು ಇರುತ್ತದೆ.

ಅಭಿಯೋಜನೆ ಪರವಾಗಿ ಇಬ್ಬರು ಸಾಕ್ಷಿದಾರರನ್ನು PW-1 ಮತ್ತು PW-2 ರಂತೆ ವಿಚಾರಣೆ ಮಾಡಿ 5 ದಾಖಲೆಗಳನ್ನು ಮತ್ತು ಮುದ್ದೇಮಾಲುಗಳನ್ನು ಗುರ್ತಿಸಿಕೊಂಡಿದ್ದು ಇರುತ್ತದೆ. PW-1 ರವರು ದಿನಾಂಕ: 08.06.2004 ರಂದು ಭಾತ್ಮಿ ಬಂದ ಮೇರೆಗೆ ರಾತ್ರಿ 8.00 ಗಂಟೆ ಸಮಯದಲ್ಲಿ ಬಿಜಾಪುರ ಶಹರದಲ್ಲಿ ಮತ್ತು ರಾಷ್ಟ್ರೀಯ ಹೆದ್ದಾರಿ 13ರ ಮೇಲೆ ಗಸ್ತು ತಿರುಗುತ್ತಾ ಬಿಜಾಪುರ ಶಹರದ ಇಂಡಿ ರಸ್ತೆಯಲ್ಲಿ ಇರುವ ಮಹಾಶಕ್ತಿ ದೇವಾಲಯದ ಎದುರುಗಡೆ ಇರುವ ಮುಳವಾಡ ದವಾಖಾನೆ ಹತ್ತಿರ ಬಂದಾಗ ರಾತ್ರಿ 8.00 ಗಂಟೆಯಾಗಿದ್ದು ಅಲ್ಲಿ ಎಡಬದಿಗೆ ಒಂದು ದಟ್ಟ ಕೆಂಪು ಬಣ್ಣದ ಮಾರುತಿ 800 ಕಾರು ನಿಂತಿದ್ದು ಅದನ್ನು ಸಂಶಯದಿಂದ ಸುತ್ತುವರಿದು ನೋಡಿದ್ದಾಗ ಅದರಲ್ಲಿ ಇಬ್ಬರು ವ್ಯಕ್ತಿಗಳು ಕುಳಿತಿದ್ದು ಒಳಗಡೆ ರಟ್ಟಿನ ಪೆಟ್ಟಿಗೆಗಳು ಇದ್ದದ್ದು ಕಂಡು ಬಂದವು ಈ ಬಗ್ಗೆ ಕಾರ್‌ನಲ್ಲಿ ಇದ್ದಂತಾ ವ್ಯಕ್ತಿಗಳಿಗೆ ವಿಚಾರಿಸಲಾಗಿ ಸಮರ್ಪಕವಾಗಿ ಉತ್ತರ ನೀಡಲಿಲ್ಲಾ 20 ಮದ್ಯದ ಪೆಟ್ಟಿಗೆಗಳನ್ನು ಜಪ್ತು ಮಾಡಿಕೊಂಡು ಆರೋಪಿತರನ್ನು ಬಂಧಿಸಿ ಮಾದರಿ ಬಾಟಲಿಗಳನ್ನು ತೆಗೆದು ಅಲ್ಲಿ ಇದ್ದಂತಾ ಸಾರ್ವಜನಿಕರಿಗೆ ಪಂಚರಾಗಲು ಕೇಳಿಕೊಂಡಾಗ ಯಾರು ಒಪ್ಪದೆ ಇದ್ದದರಿಂದಾ ಇಲಾಖಾ ಸಿಬ್ಬಂದಿಗಳನ್ನೆ ಪಂಚರಂತಾ ಪರಿಗಣಿಸಿ ಇವರ ಸಮಕ್ಷಮದಲ್ಲಿಯೆ ಮದ್ಯದ ಪೆಟ್ಟಿಗೆಗಳು ಸ್ಯಾಂಪಲ್ ಬಾಟ್ಲಿಗಳು ಹಾಗೂ ವಾಹನ ನಂ. ಮಾರುತಿ 800 ಕಾರು ಕೆಎ:22:ಎಂ:4409 ಜಪ್ತಿ ಮಾಡಿಕೊಂಡು ಗುನ್ಹೆ ನಂ. 41/03-04 ದಿನಾಂಕ: 08.06.2004 ರಂದು ದಾಖಲಿಸಲಾಯಿತು ಪಂಚನಾಮೆಯನ್ನು ನಿಶಾನೆ-ಪಿ (1) ಎಂದು ಗುರ್ತಿಸಲಾಯಿತು ಪ್ರಥಮ ವರ್ತಮಾನ ವರದಿ ನಿಶಾನೆ ಪಿ-2 ರಂತೆ ಗುರ್ತಿಸಲಾಯಿತ್ತು. ನಂತರ ಜಪ್ತಾದ ಮುದ್ದೇಮಾಲುಗಳನ್ನು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ನಗರ ಉಪವಲಯ ಇವರಿಗೆ ವರ್ಗಾಯಿಸಿದರೆಂದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿದಾರರ ಸಾಕ್ಷಿಯನ್ನು ಅಲ್ಲಗಳೆಯಲು ಕಾರಿನ ಮಾಲೀಕರು ಹಾಜರ ಆಗದೇ ಇದ್ದುದರಿಂದ ಇವರ ಸಾಕ್ಷ್ಯವನ್ನು ನಂಬಲು ಅರ್ಹ ಇರುತ್ತದೆ.

PW-2 ಮಲ್ಲಪ್ಪಾ ಭೀಮಪ್ಪಾ ಹಳ್ಳದಮನಿ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ನಗರ ಉಪ ವಲಯ ರವರು ಈ ಪ್ರಕರಣದಲ್ಲಿ ಮುಂದಿನ ತನಿಖೆಯನ್ನು ದಿನಾಂಕ: 09.06.2004 ರಂದು ಮುಂದುವರಿಸಿ ಜಪ್ತಾದ ಮಾದರಿ ಬಾಟ್ಲಿಗಳನ್ನು ರಸಾಯನಿಕ ಪರೀಕ್ಷೆಯ ಕುರಿತು ದಿನಾಂಕ: 22.09.2004 ರಂದು ಶ್ರೀ ಎಸ್. ಎಂ. ಹುದ್ದಾರ ಅಬಕಾರಿ ರಕ್ಷಕರ ಮುಖಾಂತರ ಒಂದು ಕವರಿಂಗ್ ಲೆಟರ್ ಇಟ್ಟು ಕಳಿಸಿಕೊಟ್ಟು ಅದರ ಕವರಿಂಗ್ ಲೆಟರ್ ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ-3 ಎಂದು ಗುರ್ತಿಸಲಾಗಿತ್ತು. ರಸಾಯನಿಕ ವಿಶ್ಲೇಷಣಾ ವರದಿ ನಿಶಾನೆ ಪಿ-4 ಅಂತಾ ಗುರುತಿಸಲಾಯಿತು ಜಪ್ತಾದ ವಾಹನ ಹಾಗೂ ಮದ್ಯದ ಬಾಟ್ಲಿಗಳನ್ನು ಮುಟ್ಟುಗೋಲು ಕುರಿತು ವರದಿಯನ್ನು ನಿಶಾನೆ ಪಿ-5 ಅಂತಾ ಗುರುತಿಸಲಾಯಿತು. ಇವರ ಸಾಕ್ಷಿಯನ್ನು ಕೂಡಾ ಮಾರುತಿ 800 ಕಾರ್ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರ ಆಗಿ ಅಲ್ಲಗಳೆದಿರುವುದಿಲ್ಲ ಆ ಕಾರಣ ಇವರ ಸಾಕ್ಷಿ ಕೂಡಾ ನಂಬಲು ಅರ್ಹರು ಇರುತ್ತಾರೆ.

ಈ ಮೇಲೆ ವಿಚಾರಣೆಗೆ ಒಳಪಡಿಸಿರುವ ಫಿರ್ಯಾದಿದಾರರ ಮತ್ತು ಅಬಕಾರಿ ಉಪ ತನಿಖಾಧಿಕಾರಿಗಳ ಪ್ರಕರಣ ವಿಚಾರದಲ್ಲಿ ಪೂರಕವಾಗಿ ಸಾಕ್ಷಿ ನೀಡಿದ್ದು ಈ ಕಾರಣದಿಂದ ಜಪ್ತುಗೊಳಿಸಿದ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದು ಸಾಭೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ವಾಹನದಲ್ಲಿ ಅಕ್ರಮವಾಗಿ ಕರಕೊಡದ ನಕಲಿ ಮದ್ಯವು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು ಅದು ಬಿಸಿಲು, ಮಳೆ, ಮುಂತಾದ ಹವಾಮಾನದ ವೈಪರೀತ್ಯದಿಂದ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ನಂಬರ್: ಇಎಕ್ಸ್‌ಇ: ಬಿಜೆಪಿ: ಡಿಟಿಸಿಆರ್:165:2003-04, ದಿನಾಂಕ: 20ನೇ ಜನವರಿ 2005**

ಕೆ. ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮಾರುತಿ 800 ಕಾರ್ ನಂಬರ: ಕೆಎ:22:ಎಂ:4409 ಅನ್ನು ಮತ್ತು 172.800 ಲೀಟರ್ ಕರ ಕೊಡದ ನಕಲಿ ಮದ್ಯ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಜಪ್ತಾದ 172.800 ಲೀಟರ್ ಕರ ಕೊಡದ ನಕಲಿ ಮದ್ಯವನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮಕ್ಷಮದಲ್ಲಿ (ಶ್ಯಾಂಪಲ ಬಾಟ್ಲಿಗಳನ್ನು ಹೊರತುಪಡಿಸಿ) ಮಹಜರ ಕ್ರಮ ಜರುಗಿಸಿ ನಾಶಪಡಿಸಿ ಖಾಲಿ ಬಾಟ್ಲಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇ ಮಾಡಲು ಮತ್ತು ಆರೋಪಿತರ ಮೇಲೆ ದೋಷಾರೋಪಣೆಯ ಪಟ್ಟಿಯನ್ನು ಮಾನ್ಯ ನ್ಯಾಯಾಲಯದಲ್ಲಿ ಸಲ್ಲಿಸಲು ಅಬಕಾರಿ ನಿರೀಕ್ಷಕರು ಬಿಜಾಪೂರ ವಲಯ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 20.01.2005 ರಂದು ವಿಷಯ ನಿರ್ವಾಹಕರಿಗೆ ಉಖ್ತಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ ನಂತರ ಬೆರಳಚ್ಚಿಸಿದ ಪ್ರತಿಯನ್ನು ಗಣಕೀಕೃತಗೊಳಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುತ್ತದೆ.

**ಕೆ. ಆರ್. ಗೌಡ್ರ**

ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

**ಫಿರ್ಯಾದಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪಿಡಬ್ಲ್ಯೂ-1 | ಹಣಮಂತರಾವ ಗುಂಡುರಾವ ಕುಲಕರ್ಣಿ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ | ತನಿಖಾಧಿಕಾರಿ |
| ಪಿಡಬ್ಲ್ಯೂ-2 | ಮಲ್ಲಪ್ಪ ಭೀಮಪ್ಪ ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪನಗರ ಉಪ ವಲಯ | ತನಿಖಾಧಿಕಾರಿ |

**ಅನುಬಂಧ-2**

**ಫಿರ್ಯಾದಿದಾರರ ಪರ ಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ-ಪಿ-1 | ಪಂಚನಾಮೆಯ (ದೃಢೀಕೃತ ಪತ್ರ) |
| ನಿಶಾನೆ-ಪಿ-1(ಎ) | ಪಿಡಬ್ಲ್ಯೂ-1 ರವರ ಸಹಿ |
| ನಿಶಾನೆ-ಪಿ-1(ಬಿ) | ಪಂಚರ ಸಹಿ |
| ನಿಶಾನೆ-ಪಿ-1(ಸಿ) | ಪಂಚರ ಸಹಿ |
| ನಿಶಾನೆ-ಪಿ-2 | ಪ್ರಥಮ ವರ್ತಮಾನ ವರದಿ (ದೃಢೀಕೃತ ಪತ್ರ) |
| ನಿಶಾನೆ-ಪಿ-2(ಎ) | ಪಿಡಬ್ಲ್ಯೂ-1 ರವರ ಸಹಿ |
| ನಿಶಾನೆ-ಪಿ-3 | ಶ್ಯಾಂಪಲ್ ಬಾಟ್ಲಿಗಳನ್ನು ರಸಾಯನಿಕ ಪರೀಕ್ಷೆಗೆ ಕಳುಹಿಸಿ ಕೊಟ್ಟ ಕವರಿಂಗ್ ಲೆಟರ್ |
| ನಿಶಾನೆ-ಪಿ-3(ಎ) | ಪಿಡಬ್ಲ್ಯೂ-2 ರವರ ಸಹಿ |
| ನಿಶಾನೆ-ಪಿ-4 | ರಸಾಯನಿಕ ತಜ್ಞರ ವರದಿಯ ಪ್ರಮಾಣ ಪತ್ರ |
| ನಿಶಾನೆ-ಪಿ-5 | ಮುದ್ದೇಮಾಲನ್ನು ಮುಟ್ಟುಗೋಲು ಹಾಕಿಕೊಳ್ಳುವ ಕವರಿಂಗ್ ಲೆಟರ್ ಪ್ರತಿ. |
| ನಿಶಾನೆ-ಪಿ-5(ಎ) | ಪಿಡಬ್ಲ್ಯೂ-2 ರವರ ಸಹಿ |

**ಗುರುತಿಸಿದ ಮುದ್ದೇಮಾಲು**

ಎಂಓ 1) ಮಾರುತಿ 800 ಕಾರು ಕೆಂಪು ಬಣ್ಣದ್ದು ನಂ. ಕೆಎ:22:ಎಂ:4409

2) ಶ್ಯಾಂಪಲ್ ಬಾಟಲಿಗಳು.

**ಅನುಬಂಧ-3**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:

ಇಲ್ಲಾ

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು.

ಇಲ್ಲಾ

**ಕೆ. ಆರ್. ಗೌಡ್ರ**

ಪಿ.ಆರ್.165

ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಬಿಜಾಪುರ ಜಿಲ್ಲೆ, ಬಿಜಾಪುರ.

## ಶಿಕ್ಷಣ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಇಡಿ 180 ಡಿಸಿಇ 2003 ಬೆಂಗಳೂರು, ದಿನಾಂಕ: 13ನೇ ಜನವರಿ 2005**

ಸಂಖ್ಯೆ: ಇಡಿ-180-ಡಿಸಿಇ-2003 ದಿನಾಂಕ: 18.10.2003ರ ಅಧಿಸೂಚನೆಯ ಅನುಬಂಧ 2ರಲ್ಲಿ ಗೃಹವಿಜ್ಞಾನ ವಿಷಯದಲ್ಲಿ ಕ್ರಮ ಸಂಖ್ಯೆ: 4ರಲ್ಲಿ ಸುಚೀತಾ ಪ್ರಸಾದ ರವರ ಹೆಸರಿನ ಮುಂದೆ ಕಾಲಂ 5ರಲ್ಲಿ "3ಬಿ" ಎಂದಿರುವುದರ ಬದಲಾಗಿ "ಸಾಮಾನ್ಯ ಅಭ್ಯರ್ಥಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.163

**ಕೆ. ಎಸ್. ವೇಣುಗೋಪಾಲ್**
ಸರ್ಕಾರದ ಉಪ ಕಾರ್ಯದರ್ಶಿ (ಪ್ರಭಾರ),
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ**

**ನಂ: ಎಲ್‌ಆರ್‌ಎಫ್:ಸಿಆರ್:88/04-05: ಬೆಂಗಳೂರು ದಿನಾಂಕ: 7ನೇ ಜನವರಿ 2005**

**ವಿಷಯ :** ಶ್ರೀ ಕುಮಾರನ್ ಎಜ್ಯುಕೇಷನ್ ಮತ್ತು ಕಲ್ಚರಲ್ ಟ್ರಸ್ಟ್ ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಮಲ್ಲಸಂದ್ರ ಗ್ರಾಮದ ಸ.ನಂ. 44 ರಲ್ಲಿ 2-39 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ಕುಮಾರನ್ ಎಜ್ಯುಕೇಷನ್ ಮತ್ತು ಕಲ್ಚರಲ್ ಟ್ರಸ್ಟ್ ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಮಲ್ಲಸಂದ್ರ ಗ್ರಾಮದ ಸ.ನಂ. 44 ರಲ್ಲಿ 2-39 ಎಕರೆ: ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್:(109) ಸಿಆರ್ 34/04-05 ದಿನಾಂಕ: 30.12.2004 ರಲ್ಲಿ ಪ್ರಸ್ತಾಪಿತ

ಗ್ರಾಮದ ಸ.ನಂ. 44ರಲ್ಲಿ ಒಟ್ಟು 2-39 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಜಯನಗರ ಉಪನೊಂದಣಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ: 24.2.1993 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಮಲ್ಲಸಂದ್ರ ಗ್ರಾಮದ ಸ.ನಂ.44ರಲ್ಲಿ 2-39 ಎಕರೆ:ಗುಂಟೆ ಜಮೀನನ್ನು ಶ್ರೀ ಕುಮಾರನ್ ಎಜ್ಯುಕೇಷನಲ್ ಮತ್ತು ಕಲ್ಚರಲ್ ಟ್ರಸ್ಟ್ ನಂ.326 ಬ್ಲಾಕ್, 'ಹೆಚ್' ಉಷಾ ಅಪಾರ್ಟ್‌ಮೆಂಟ್ಸ್, ಜಯನಗರ 4ನೇ ಬಡಾವಣೆ ಬೆಂಗಳೂರು-2 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸ ಬಾರದು.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.162 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ. ಅಬಕಾರಿ: ಸಿಆರ್‌ಎಂ: ಡಿಟಿಸಿಆರ್:54: 2003-04**

**ಉಪಸ್ಥಿತರು :** ಶ್ರೀ ಎ. ಎಸ್. ವಿಶ್ವರೂಪ ಕೆ. ಇ. ಎಸ್. ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ ಕಾರವಾರ.

**ಫಿರ್ಯಾಧಿದಾರರು :** ಸಿ. ಎನ್. ಸಾವಂತ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ ಕಾರವಾರ
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ).

**ವಿರುದ್ಧ**

**ಆರೋಪಿತರು :**
1. ಮಾರುತಿ ತಂದೆ ಲಕ್ಷ್ಮಣ ನಾಯ್ಕ್ ಸಾ: ಗುರುಮಠ ರಸ್ತೆ ಬಾಡ್ ಕಾರವಾರ
2. ವಿಮಲಾಬಾಯಿ ಗಂಡ ಬೊಂಡ್ಯಾ ಹರಿಕಂತ್ರ, ಸಾ: ಹರಿಕಂತ್ರ ವಾಡಾ, ಬಸ್ ಸ್ಟ್ಯಾಂಡ್ ಹತ್ತಿರ ಕಾರವಾರ
3. ಸೀಮಾ ಕರಿಯಪ್ಪಾ ಹರಿಕಂತ್ರ ಸಾ: ಹರಿಕಂತ್ರ ವಾಡಾ ಬಸ್ ಸ್ಟ್ಯಾಂಡ್ ಹತ್ತಿರ ಕಾರವಾರ.

**ಅರ್ಜಿದಾರರು:** ಶ್ರೀಮತಿ ಮಾಯಾ ಮಾರುತಿ ನಾಯ್ಕ
ವಾಸ: ಗುರುಮಠದ ಹತ್ತಿರ, ಬಾಡ ಕಾರವಾರ.
(ಶ್ರೀ ಯೋಗೇಶ್ ಎಸ್. ನಾಯ್ಕ್, ವಕೀಲರು ಕಾರವಾರ ಇವರು ಪ್ರತಿನಿಧಿಸಿರುತ್ತಾರೆ).

**ತೀರ್ಪು**

1. ದಿನಾಂಕ: 26.07.2003 ರಂದು ಫಿರ್ಯಾದುದಾರು ತಮ್ಮ ಸಿಬ್ಬಂದಿ ಹಾಗೂ ಪಂಚರನ್ನು ಕರೆದುಕೊಂಡು ಸದಾಶಿವಗಡದಲ್ಲಿ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 17ರಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಬೆಳಗಿನ 10.00 ಗಂಟೆಯ ಸಮಯಕ್ಕೆ ಸದಾಶಿವಗಡದ ಕಟ್ಟಿಗೆ ಡಿಪೋ ಹತ್ತಿರ ಕಾರವಾರ ಅಭಿಮುಖವಾಗಿ ಬರುತ್ತಿದ್ದ ವಾಹನವಾದ ಮಹೀಂದ್ರಾ ಕಮಾಂಡರ್ ಜೀಪ್ ಸಂಖ್ಯೆ: ಕೆಎ-30-ಎಂ-2027 ನೇದನ್ನು ಸಂಶಯದ ಮೇರೆಗೆ ನಿಲ್ಲಿಸಲು

ಸೂಚನೆ ಕೊಟ್ಟು, ಸದರಿ ವಾಹನ ನಿಲ್ಲಿಸಿದಾಗ, ಪಂಚರ ಸಮ್ಮುಖದಲ್ಲಿ ಸದರಿ ವಾಹನ ತಪಾಸಣೆ ಮಾಡಲಾಗಿ ಇದರಲ್ಲಿ ಹಿಂದುಗಡೆ ಇಬ್ಬರು ಹೆಂಗಸರು ಇದ್ದು, ಒಳಗಡೆ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಪ್ರವಾಹಿ ಪದಾರ್ಥ ತುಂಬಿದ್ದು ಇರುವುದು ಕಂಡು ಬಂದಿತೆಂದೂ, ಸದರಿ ಜೀಪಿನಲ್ಲಿರುವ ಹೆಂಗಸರಿಗೆ ಮತ್ತು ಜೀಪ್ ವಾಹನದ ಚಾಲಕನಿಗೆ ಈ ಪದಾರ್ಥ ಯಾವುದೆಂದು ಕೇಳಲಾಗಿ ಚಿಲ್ಲರೆ ಫೆನ್ನಿ ಎಂದು ತಿಳಿಸಿದರೆಂದೂ, ಪಂಚರ ಸಮ್ಮುಖದಲ್ಲಿ ಸದರಿ ಕ್ಯಾನಿನಲ್ಲಿರುವ ಪ್ರವಾಹಿ ಪದಾರ್ಥ ಪರಿಶೀಲಿಸಲಾಗಿ ಚಿಲ್ಲರೆ ಫೆನ್ನಿಯೆಂದು ಖಾತ್ರಿಯಾಯಿತೆಂದೂ, ಜೀಪಿನಲ್ಲಿ ಒಟ್ಟೂ 30 ಕ್ಯಾನುಗಳಿದ್ದು, ಪ್ರತಿಯೊಂದರಲ್ಲಿ ತಲಾ 5 ಲೀಟರಿನಂತೆ ಒಟ್ಟೂ 150 ಲೀಟರ್ ಚಿಲ್ಲರೆ ಫೆನ್ನಿ ಇತ್ತೆಂದೂ ತಿಳಿಸಿ, ಇವುಗಳನ್ನು ಸಾಗಿಸಲು ಸರ್ಕಾರದ ಪರವಾನಿಗೆ ಯಾಗಲೀ ರಹದಾರಿ ಪತ್ರವಾಗಲೀ ಇದೆಯೇ ಎಂದು ಕೇಳಲಾಗಿ ಅವರು ಇಲ್ಲವೆಂದು ತಿಳಿಸಿದಾಗ ವಾಹನದಲ್ಲಿ ಫೆನ್ನಿಯನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿರುವುದು ಖಚಿತವಾಗಿದ್ದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಅಪರಾಧ ಕಲಂ 11 ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 38(ಎ) ಮತ್ತು 43 (ಎ) (2) ಅನ್ವಯ ಗುನ್ಹಾರ್ಹ ಅಪರಾಧವಾಗಿರುತ್ತದೆಂದೂ ತನ್ನ ಫಿರ್ಯಾದನ್ನು ದಾಖಲಿಸಿ, ಕಾರವಾರ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರ ಗುನ್ಹೆ ಸಂಖ್ಯೆ: 2/2003-04 ದಿನಾಂಕ: 26.07.2003 ರಂತೆ ಪ್ರಕರಣವನ್ನು ದಾಖಲಿಸಿ ಸಂಬಂಧಪಟ್ಟ ಪ್ರ.ಮಾ.ವರದಿಯ ಕಾರ್ಬನ್ ಪ್ರತಿ ಫಿರ್ಯಾದಿನ ಕಾರ್ಬನ್ ಪ್ರತಿ ಮತ್ತು ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

2. ದಿನಾಂಕ: 6.8.2003 ರಂದು ಶ್ರೀ ಯೋಗೇಶ್ ಎಸ್. ನಾಯ್ಕ, ವಕೀಲರು ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸುತ್ತಾ, ವಾಹನಕ್ಕೆ ಸಂಬಂಧಿಸಿದ ಆರ್. ಸಿ. ಪುಸ್ತಕದ ನಕಲು ಮತ್ತು ಪ್ರಮಾಣ ಪತ್ರದೊಂದಿಗೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನವು ಶ್ರೀಮತಿ ಮಾಯಾ ಮಾರುತಿ ನಾಯ್ಕ, ಸಾ: ನಂದನಗದ್ದಾ, ಗುರುಮಠದ ಹತ್ತಿರ ಕಾರವಾರ ಇವರಿಗೆ ಸಂಬಂಧಿಸಿರುವದಾಗಿ ತಿಳಿಸಿ, ಈ ಪ್ರಕರಣದಲ್ಲಿ ಹೊರಿಸಲಾದ ಆರೋಪವನ್ನು ಅಲ್ಲಗಳೆದು ಜಪ್ತಿಯಾದ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಇಎಕ್ಸ್‌ಇ: ಸಿಆರ್‌ಎಂ: ಡಿಟಿಸಿಆರ್:54:2003-04 ದಿನಾಂಕ: 3.9.2003 ರಂತೆ ಈ ಪ್ರಕರಣದಲ್ಲಿ ವಾಹನದ ಮಧ್ಯಂತರ ವಶದ ಬಿಡುಗಡೆಗೆ ಕೋರಿದ ಅರ್ಜಿಯನ್ನು ತಿರಸ್ಕರಿಸಿದ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿ ಸಲ್ಲಿಸಿದನ್ವಯ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 85/2003 ದಿನಾಂಕ: 02.12.2003 ರಲ್ಲಿ ಆದೇಶಿಸಿದನ್ವಯ ಅರ್ಜಿದಾರರಿಂದ ರೂ.1,00,000/-ಗಳಿಗೆ ಸಮನಾದ ನಷ್ಟಭರ್ತಿ ಪತ್ರವನ್ನು ಜಾಮೀನಿನೊಂದಿಗೆ ಹಾಗೂ ರೂ. 30,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೆಲವು ಷರತ್ತುಗಳನ್ನು ವಿಧಿಸಿ ದಿನಾಂಕ: 20.01.2004 ರಂದು ಸದರಿ ವಾಹನದ ಮಧ್ಯಂತರ ವಶದ ಬಿಡುಗಡೆಗೆ ಈ ಪ್ರಾಧಿಕಾರದಿಂದ ಆದೇಶಿಸಲಾಗಿರುತ್ತದೆ.

4. ಈ ಪ್ರಕರಣದಲ್ಲಿ ಜಪ್ತಿಯಾದಂತಹ ಎಲ್ಲಾ ಸ್ವತ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1)(ಎ) ರನ್ವಯ ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಾರಣಕೇಳಿ ನೋಟಿಸನ್ನು ಪ್ರಕರಣದ ಎಲ್ಲಾ ಆರೋಪಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ: 3.9.2003 ರಂದು ಕಳುಹಿಸಲಾಗಿ ಅದನ್ನು ಅವರುಗಳು ದಿನಾಂಕ: 26.09.2003 ರಂದು ಸ್ವೀಕರಿಸಿ ಅದಕ್ಕೆ ಯಾರೂ ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

5. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 17.10.2003 ರಂದು ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದಲ್ಲಿ ಸಲ್ಲಿಸಿದ್ದು, ಸದರಿ ವರದಿಯನ್ವಯ ಮಾದರಿಯಲ್ಲಿ 79.2 ಯ.ಪಿ. ಯಷ್ಟು ಮದ್ಯಸಾರದ ಅಂಶವು ಪತ್ತೆಯಾಗಿದ್ದು, ಇದು ಮಾನವನ ಸೇವನೆಗೆ ಯೋಗ್ಯವಿರುವುದಾಗಿ ಮುಖ್ಯ ರಾಸಾಯನಿಕ ತಜ್ಞರು ಕೇಂದ್ರ ರಾಸಾಯನಿಕ ಪ್ರಯೋಗಾಲಯ ಬೆಂಗಳೂರು ರವರು ವರದಿ ಸಂಖ್ಯೆ: ಸಿಸಿಎಲ್:4533:2003, ದಿನಾಂಕ: 16.09.2003 ರಲ್ಲಿ ತನ್ನ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್:54:2003-04, ದಿನಾಂಕ: 20.01.2004 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಗೋವಾ ರಾಜ್ಯದ ಲೂಜ್ ಫೆನ್ನಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಇವು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆ ಪಡೆಯದಿರುವುದರಿಂದ ಇವನ್ನು ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ ಕಾರವಾರ ರವರ ಸಮಕ್ಷಮ ಪಂಚನಾಮೆಯ ಮೂಲಕ ನಾಶಪಡಿಸಲು ಹಾಗೂ ಖಾಲಿ ಕ್ಯಾನುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಆದೇಶಿಸಲಾಗಿರುತ್ತದೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 38(ಎ) ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 4 ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ 1 ರಿಂದ 4 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ ಈ ಪ್ರಕರಣದ ಪಂಚ ಸಾಕ್ಷಿದಾರನಾದ ನಾಗರಾಜ ತಿಮ್ಮೇಗೌಡ ಈತನು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾನೆ.

7. ಪಿಡಬ್ಲ್ಯೂ-1 ರಿಂದ 4 ನೇಯವರ ಹೇಳಿಕೆಯ ಆಧಾರದ ಮೇಲೆ ಮತ್ತು ಅಭಿಯೋಜನೆ ಪಕ್ಷದವರು ಸಲ್ಲಿಸಿರುವ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಪಿಡಬ್ಲ್ಯೂ-1 ರಂತೆ ಪಡೆದುಕೊಳ್ಳಲಾಯಿತು.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ಯೋಗೇಶ ಶಿವಾನಂದ ನಾಯ್ಕ, ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡುಬಂತು.

**9. ವಿವಾದಾಂಶಗಳು:**

1. ದಿನಾಂಕ: 26.07.2003 ರಂದು ಬೆಳಿಗ್ಗೆ 10.00 ಗಂಟೆಗೆ ಕಾರವಾರ ತಾಲೂಕಿನ ಸದಾಶಿವಗಡದ ರಾಷ್ಟ್ರೀಯ ಹೆದ್ದಾರಿ 17 ರಲ್ಲಿರುವ ಕಟ್ಟಿಗೆಯ ಡಿಪೊ ಹತ್ತಿರ ಆರೋಪಿಗಳು ಗೋವಾ ಕಡೆಯಿಂದ ಬರುತ್ತಿದ್ದ ಜೀಪ್ ನಂ. ಕೆಎ-30/ ಎಂ-2072 ನೇದರಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ತಯಾರಿಕೆಯ ಚಿಲ್ಲರೆ ಫೆನ್ನಿಯನ್ನು ಮದ್ಯವನ್ನು ಸಾಗಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 38(ಎ) ರಡಿ ಶಿಕ್ಷಾರ್ಹ ಅಪರಾಧವೆಸಗಿರುವದನ್ನು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ನಿರೂಪಿಸಿರುತ್ತಾರೆಯೇ ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರ್ಯಾರೂ ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ರುಜುವಾತುಪಡಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

10. ಅಂಶ-1 :- ಸಕಾರಾತ್ಮಕವಾಗಿ
ಅಂಶ-2 :- ನಕಾರಾತ್ಮಕವಾಗಿ
ಅಂಶ-3 :- ಸಕಾರಾತ್ಮಕವಾಗಿ

**ಕಾರಣಗಳು**

11. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಸಿ. ಎನ್. ಸಾವಂತ, ಅಬಕಾರಿ ಉಪ ನಿರೀಕ್ಷಕರು ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 25.2.2004 ರಂದು ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ, ಇಬ್ಬರೂ ಪಂಚರು ಶಿವಮೊಗ್ಗ ಜಿಲ್ಲೆಯವರು ಮತ್ತು ಅವರು ಏನು ಕೆಲಸ ಮಾಡುತ್ತಿದ್ದಾರೆನ್ನುವುದು ಗೊತ್ತಿಲ್ಲವೆಂದೂ ಅವರು ಅಬಕಾರಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತಾರೆ ಮತ್ತು ಅವರು ಖಾಯಂ ಪಂಚರು ಅನ್ನುವುದು ಸರಿಯಲ್ಲವೆಂದೂ ತನಗೆ ಬಾತ್ಮಿ ಬಂದ ಸಮಯದಲ್ಲಿ ತಾನು ಕಛೇರಿಯಲ್ಲಿದ್ದೆ. ತನ್ನ ಕಛೇರಿಯಿಂದ ಈ ನ್ಯಾಯಾಲಯವು 2. ಕಿಮೀ. ಅಂತರದಲ್ಲಿದೆಯೆಂದೂ ಪ್ರಾಧಿಕಾರದ ಕಟ್ಟಡದ ಪಕ್ಕದಲ್ಲಿ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯವಿದೆಯೆಂದೂ ಸರ್ಕಾರಿ ಜೀಪಿನ ಸಂಖ್ಯೆಯನ್ನು ನಮೂದಿಸಿದ ಬಗ್ಗೆ ತನಗೆ ನೆನಪಿಲ್ಲವೆಂದೂ ನೀಲಿಬಣ್ಣದ ಜೀಪಿನಲ್ಲಿ ಸರಾಯಿ ಸಾಗಾಟವಾಗುತ್ತಿದೆ ಎಂದು ದೂರವಾಣಿಯ ಮೂಲಕ ಬಾತ್ಮಿ ಬಂದಿತ್ತೆಂದೂ ಕಲಂ 54ರ ಪ್ರಕಾರ ಮ್ಯಾಜೀಸ್ಟ್ರೇಟರಿಂದ ವಾರೆಂಟನ್ನು ಪಡೆಯಲು ಸಮಯವಿರಲಿಲ್ಲವೆಂದೂ ಅಷ್ಟರಲ್ಲಿ ಆರೋಪಿಗಳು ಮುದ್ದೆ ಮಾಲನ್ನು ಬೇರೆಡೆಗೆ ಪರಭಾರೆ ಮಾಡಬಹುದೆಂಬ ಮತ್ತು ಪರಾರಿಯಾಗುವ ಸಂಭವ ಇತ್ತೆಂದೂ. ಕಟ್ಟಿಗೆ ಡಿಪೋ ಎದುರುಗಡೆ ಸುಮಾರು ದೂರದಲ್ಲಿ ಬಾಪೂಜಿ ಕಾಲೇಜ್ ಇರುತ್ತದೆಂದೂ, ಎನ್.ಎಚ್. 17 ರಲ್ಲಿ ಸಾಕಷ್ಟು ಗಾಡಿಗಳು ಮತ್ತು ಜನರು ಓಡಾಡುತ್ತಿರುತ್ತಾರೆಂದೂ, ಆ ಸಮಯದಲ್ಲಿ 4-5 ವಾಹನಗಳನ್ನು ತಪಾಸಣೆ ಮಾಡಿದ್ದೆವೆಂದೂ, ಆಗ ಸುಮಾರು 15-20 ನಿಮಿಷ ಆಗಿದೆ. ಯಾವುದೇ ವಾಹನವು ಗೋವಾ ಕಡೆಯಿಂದ ಬರಬೇಕಾದರೆ ಮೂರು ಚೆಕ್‌ಪೋಸ್ಟ್‌ಗಳನ್ನು ದಾಟಿ ಬರಬೇಕೆಂಬುದು ನಿಜವೆಂದೂ, 1ನೇಯದು ಗೋವಾ ರಾಜ್ಯದ ಚೆಕ್‌ಪೋಸ್ಟ್ 2ನೇಯದು ಅಬಕಾರಿ ಇಲಾಖೆಯ ಚೆಕ್‌ಪೋಸ್ಟ್ ಮತ್ತು 3ನೇಯದು ಪೊಲೀಸ್ ಇಲಾಖೆಯ ಚೆಕ್‌ಪೋಸ್ಟ್ ಎನ್ನುವುದು ಸರಿಯೆಂದೂ, ಸ್ಥಳೀಯ ಜನರು ಸಿಗದೇ ಇರುವ ಕಾರಣಕ್ಕಾಗಿ ಪಂಚರನ್ನು ಇಲ್ಲಿಂದಲೇ ಕರೆದುಕೊಂಡು ಹೋಗಿದ್ದೆವೆಂದೂ, ಜೀಪು ಸುಮಾರು 10 ಗಂಟೆಗೆ ಬಂದಿತೆಂದೂ, ಜೀಪಿನ ಚಾಲಕ ಓಡಿ ಹೋಗುವ ಪ್ರಯತ್ನ ಪಡಲಿಲ್ಲವೆಂದೂ ಜೀಪಿನಲ್ಲಿದ್ದ ಹೆಂಗಸರು ಮತ್ತು ಚಾಲಕರಿಗೆ ಸಂಬಂಧ ಏನು ಎನ್ನುವುದರ ಬಗ್ಗೆ ಕೇಳಲಿಲ್ಲವೆಂದೂ, ವಾಹನ ಚಾಲಕನಿಗಾಗಲೀ ಹೆಂಗಸರಿಗಾಗಲೀ ಯಾವುದೇ ರೀತಿಯ ಸಂಬಂಧ ಇರುವ ಬಗ್ಗೆ ತನಗೆ ಗೊತ್ತಿಲ್ಲವೆಂದೂ, ಜೀಪಿಗೆ ಮತ್ತು ಸರಾಯಿಗೆ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲವೆಂದೂ, ಇಬ್ಬರೇ ಹೆಂಗಸರಿದ್ದರು ಎನ್ನುವುದು ಸುಳ್ಳು ಎನ್ನುವುದು ಸರಿಯಲ್ಲವೆಂದೂ, ಆ ಸಮಯದಲ್ಲಿ ಐದಾರು ಜನರು ಇದ್ದರು ಎಂದು ಅವರು ಹೇಳುತ್ತಿದ್ದಾರೆ ಎನ್ನುವುದು ಸರಿಯಲ್ಲವೆಂದೂ, ಚಾಲಕ ಗುರುಮಠದ ಹತ್ತಿರ ತನ್ನ ಮನೆ ಎಂದು ಹೇಳಿದ್ದನೆಂದೂ ಏನು ಕೆಲಸ ಮಾಡುತ್ತಾನೆಂದು ಹೇಳಿರಲಿಲ್ಲವೆಂದೂ, ಅಂಕಿ ಸಂಖ್ಯೆಗಾಗಿ ಸುಳ್ಳು ಕೇಸನ್ನು ದಾಖಲಿಸಿದ್ದೇವೆ ಎನ್ನುವುದು ಸರಿಯಲ್ಲವೆಂದೂ, ಯಾವುದೇ ರೀತಿಯ ಸರಾಯಿಯನ್ನು ಸಾಗಿಸುತ್ತಿರಲಿಲ್ಲ ಎನ್ನುವುದು ಸರಿಯಲ್ಲವೆಂದೂ, ಕಛೇರಿಯಲ್ಲಿ ಕುಳಿತು ಪಂಚನಾಮೆ ತಯಾರಿಸಿದ್ದೇವೆ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ. ಅದೇ ದಿನ ಈ ಪ್ರಕರಣದ ತನಿಖಾಧಿಕಾರಿಗಳಾದ ಬಿ. ಎಂ. ಖಾಂಡೇಕರ, ಅಬಕಾರಿ ಉಪ ನಿರೀಕ್ಷಕರು, ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿಡಬ್ಲ್ಯೂ-2 ರಂತೆ ತನ್ನ ಸಾಕ್ಷಿಯನ್ನು ನುಡಿಯುತ್ತಾ ಈ ಕೇಸಿನ ಕಾಗದ ಪತ್ರಗಳನ್ನು ಪಿಡಬ್ಲ್ಯೂ-1ನೇ ಯವರಿಂದ ಪಡೆದುಕೊಂಡು ಪರಿಶೀಲಿಸಿ ಆರೋಪಿಯು ಅಪರಾಧ ಮಾಡಿದ ಬಗ್ಗೆ ಸಾಕಷ್ಟು ಸಾಕ್ಷಿ ಪುರಾವೆಗಳು ಇದ್ದದ್ದು ಕಂಡುಬಂದಿದ್ದರಿಂದ ಆರೋಪಿಯ ಮೇಲೆ ಅಂತಿಮ ವರದಿಯನ್ನು ಸಲ್ಲಿಸಿರುತ್ತೇನೆಂದು ನುಡಿದು, ನಂತರ ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ ಕಾಗದ ಪತ್ರಗಳನ್ನು ಯಾವುದೇ ಪರಿಶೀಲನೆ ಮಾಡದೇ ಸುಳ್ಳು ಅಂತಿಮ ಆರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎನ್ನುವುದು ಸರಿಯಲ್ಲವೆಂದೂ ಅಂಕಿ ಸಂಖ್ಯೆಗಳಿಗಾಗಿ ಅಂತಿಮ ವರದಿಯನ್ನು ಸಲ್ಲಿಸಿದ್ದೇನೆ ಎನ್ನುವುದು ಸರಿಯಲ್ಲವೆಂದೂ ರಾಸಾಯನಿಕ ವರದಿಯು ಈ ಕೇಸಿಗೆ ಸಂಬಂಧಪಟ್ಟಿದ್ದಲ್ಲ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

12. ಇಲ್ಲಿ ಗಮನಿಸಬೇಕಾದ ಮುಖ್ಯಾಂಶವೇನೆಂದರೆ: ಈ ಪ್ರಕರಣದ ಪಂಚರು ಅಬಕಾರಿ ಗುತ್ತಿಗೆದಾರರ ಕಡೆ ಕೆಲಸ ಮಾಡುವವರೆಂಬುದಕ್ಕೆ ಯಾವುದೇ ಆಧಾರವಿಲ್ಲ. ಸರಾಯಿ ಗುತ್ತಿಗೆದಾರರಿಗೆ ಕಳ್ಳಸರಾಯಿ ಮಾರಾಟ ಮಾಡುವವರ ಮೇಲೆ ದ್ವೇಷವಿರುತ್ತದೆಯೇ ಹೊರತು ಇತರರ ಮೇಲಲ್ಲ. ಅವರು ಖಾಯಂ ಪಂಚರೆನ್ನುವ ಬಗ್ಗೆ ಸಾಕ್ಷ್ಯಾಧಾರಗಳಿಲ್ಲ. ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರೆಂಟ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ. ಅ. ಕಾಯ್ದೆ 1965 ರ ಕಲಂ 54 ರಂತೆ ಅಧಿಕಾರವಿರುತ್ತದೆ ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ.ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

"In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to aviod detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of

motion any delay which is implicit in an attempt to got a search warrant will give the offender the opportunity to escape or destroy the evidence regarding the offence.

Fallure to record in black and white what is obvisous may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search, The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

ಪಂಚರನ್ನು ಫಿರ್ಯಾದಿ ಕಡೆಯವರು ಒಯ್ದಿದ್ದರೂ ಅವರುಗಳು ಸ್ವತಂತ್ರ ಪಂಚರಾಗಿರುವುದರಿಂದ ಸ್ಥಳೀಯ ಪಂಚರನ್ನು ಕರೆಸುವ ಅವಶ್ಯಕತೆ ಕಂಡುಬರುವುದಿಲ್ಲ. ಗೋವಾ ರಾಜ್ಯದಿಂದ ಹಾಯ್ದು ಬರಬೇಕಾದರೆ 3 ಚೆಕ್‌ಪೋಸ್ಟ್‌ಗಳನ್ನು ದಾಟಿ ಬರಬೇಕೆಂಬುದು ಸರಿ, ಆದರೆ ಮದ್ಯ ಸಾಗಾಣಿಕೆದಾರರು ಗೋವಾದಿಂದ ಕರ್ನಾಟಕಕ್ಕೆ ಚೆಕ್‌ಪೋಸ್ಟಿನ ಹಿಂದುಗಡೆ ಇರುವ ಜಂಗಲಿನ ಕಳ್ಳದಾರಿಯ ಮೂಲಕ ತಲೆ ಹೊರೆಯ ಮೇಲೆ ಮಾಜಾಳಿ ಎಂಬ ಗ್ರಾಮಕ್ಕೆ ಸಾಗಿಸುತ್ತಿರುವಾಗ ಸಿಕ್ಕು ಬಿದ್ದು ಗುನ್ನೆ ದಾಖಲಿಸಿದ ಸಾಕಷ್ಟು ಪ್ರಕರಣಗಳು ಕಳೆದ ಐದು ವರ್ಷಗಳಲ್ಲಿ ನಡೆದಿವೆ. ವಾಹನ ಚಾಲಕನು ಗಡಬಡಿಸಿ ವಾಹನ ನಿಲ್ಲಿಸಿದನೆಂದು ಪಂಚನಾಮೆಯಲ್ಲಿ ನಮೂದಿಸಿರುವ ಕಾರಣ ಚಾಲಕ ಓಡಿ ಹೋಗುವ ಪ್ರಮೇಯ ಇರುವುದಿಲ್ಲ.

13. ಈ ಪ್ರಕರಣದ ಪಂಚಸಾಕ್ಷ್ಯ ನಂ. 2ನೇ ಯವರಾದ ನಾಗರಾಜ ತಿಮ್ಮೇಗೌಡ ಇವರು ದಿನಾಂಕ: 17.03.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿಡಬ್ಲ್ಯೂ-2 ರಂತೆ ಪ್ರತಿಕೂಲ ಸಾಕ್ಷಿಯನ್ನು ನುಡಿದು ನಂತರ ಮಾನ್ಯ ಎ.ಡಿ.ಪಿ.ಯವರ ಪಾಟೀಸವಾಲಿನಲ್ಲಿ ತಾನು 4-5 ಇಯತ್ತೆಯವರೆಗೆ ಓದಿರುತ್ತೇನೆಂದೂ, ತಾನು ಇಂಗ್ಲೀಷ್‌ನಲ್ಲಿ ಸಹಿ ಮಾಡಿದ್ದು ಇರುತ್ತದೆಯೆಂದೂ, ಈಗ ಸರಾಯಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತಿದ್ದೇನೆಂದೂ, ತನಗೆ ತಿಂಗಳಿಗೆ ರೂ. 1,500 ಸಂಬಳ ಸಿಗುತ್ತದೆ ಎಂದೂ, ತಾನು ಮತ್ತು ತನ್ನ ತಮ್ಮ ದುಡಿಯುತ್ತಿದ್ದು ಮನೆಯಲ್ಲಿ ಒಟ್ಟು 6 ಜನರು ಇರುತ್ತಿದ್ದು, ಅವರ ಪಾಲನೆ ಪೋಷಣೆಯ ಜವಾಬ್ದಾರಿ ತಮ್ಮ ಮೇಲೆ ಇರುತ್ತದೆಯೆಂದೂ, ಪಿಡಬ್ಲ್ಯೂ-1 ರವರು ತನ್ನ ಸಮಕ್ಷಮ ಜೀಪಿನಲ್ಲಿ ಗೋವಾ ಫೆನ್ನಿ ಸಾಗಿಸುತ್ತಿದ್ದಾಗ ಅದನ್ನು ತಡೆದು ವಾಹನ ಸಮೇತ ಗೋವಾ ಫೆನ್ನಿ ಜಪ್ತು ಮಾಡಿರುತ್ತೇನೆ ಅಂತಾ ಹೇಳುವುದು ಸುಳ್ಳಾಗಿರುತ್ತದೆಂದೂ, ಪಿಡಬ್ಲ್ಯೂ-1 ರವರು ತನಗೆ ಗೊತ್ತೆಂದೂ, ತನಗೆ ಯಾವುದೇ ಒಂದು ಪತ್ರ ಕೊಟ್ಟಾಗ ಅದನ್ನು ಓದಿ ನೋಡಿ ವಿಷಯ ಸತ್ಯವಿದ್ದಲ್ಲಿ ಮಾತ್ರ ಸಹಿ ಮಾಡುತ್ತೇನೆಂದೂ, ಸುಳ್ಳಾಗಿದ್ದಲ್ಲಿ ಸಹಿ ಮಾಡುವುದಿಲ್ಲವೆಂದೂ, ಪಿಡಬ್ಲ್ಯೂ-1 ರವರು ಬಲವಂತವಾಗಿ ತನ್ನ ಸಹಿಯನ್ನು ಪಡೆದಿರುವುದಿಲ್ಲವೆಂದೂ, ಈ ಪ್ರಕರಣದಲ್ಲಿ ಅರ್ಜಿದಾರರಿಂದ ದುಡ್ಡು ಪಡೆದು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದೂ, ಸದಾಶಿವಗಡ ಕಟ್ಟಿಗೆ ಡಿಪೋ ಹತ್ತಿರ ಜೀಪ್ ಸಂಖ್ಯೆ: ಕೆಎ-30/ಎಂ-2072 ನೇಯದು ಬಂದಿತ್ತು ಮತ್ತು ಅದರಲ್ಲಿ ಗೋವಾ ಫೆನ್ನಿಯ ಕ್ಯಾನುಗಳಿದ್ದವು ಮತ್ತು ಅವುಗಳನ್ನು ಫಿರ್ಯಾದಿ ಕಡೆಯವರು ನನ್ನ ಸಮಕ್ಷಮ ಜಪ್ತುಮಾಡಿದರು ಎನ್ನುವುದು ಸರಿಯಲ್ಲವೆಂದೂ, ಸರಾಯಿ ಸಾಗಿಸಿದ್ದು ಸಾಬೀತಾದಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ ಎಂಬ ಕಾರಣದಿಂದ ಅರ್ಜಿದಾರನ ಮಾತು ಕೇಳಿ ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದೂ, ಸುಳ್ಳು ಸಾಕ್ಷಿ ನುಡಿದರೆ ಶಿಕ್ಷೆಯಾಗುತ್ತದೆ ಎಂಬುದು ತನಗೆ ಗೊತ್ತಿದೆಯೆಂದೂ, ಪ್ರಸನ್ನ ಹೆಗಡೆ ಇವರು ತನ್ನ ಪರಿಚಯ ಇದ್ದು ಇವರು ಪಂಚನಾಮೆಯ ಸಹಿ ಮಾಡುವ ಕಾಲಕ್ಕೆ ಇದ್ದಿರಲಿಲ್ಲ ತಾನು ಮತ್ತು ಅವರು ಸೇರಿಯೇ ಪಂಚನಾಮೆಗೆ ಸಹಿ ಮಾಡಿದ್ದೇವೆ ಎನ್ನುವುದು ಸರಿಯಲ್ಲವೆಂದು ನುಡಿದು ನಂತರ ಅರ್ಜಿದಾರರ ಪರ ವಕೀಲರ ಮರು ಸವಾಲಿನಲ್ಲಿ ತಾನು ಜಿ. ಕೆ. ಸುಧಾನಳಿನಿ ಇವರ ಕಂಪನಿಯಲ್ಲಿ ಸರಾಯಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತೇನೆಂದೂ, ಪ್ರಸನ್ನ ಹೆಗಡೆಯವರು ತಮ್ಮ ಮ್ಯಾನೇಜರರು ಎಂದೂ ನುಡಿದಿರುತ್ತಾರೆ.

14. ಈ ಪ್ರಕರಣದ ಪಂಚಸಾಕ್ಷಿ ನಂ. 1ನೇಯವರಾದ ಪ್ರಸನ್ನ ಕೃಷ್ಣಾ ಹೆಗಡೆ ಇವರು ದಿನಾಂಕ: 22.09.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿಡಬ್ಲ್ಯೂ-4 ರಂತೆ ತನ್ನ ಸಾಕ್ಷಿಯನ್ನು ನುಡಿಯುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡು ತನ್ನ ಸಹಿಯನ್ನು ನಿಶಾನೆ ಪಿ-1-ಬಿ ರಲ್ಲಿ ಗುರ್ತಿಸಿಕೊಂಡು ವಾಹನ ಮತ್ತು ಜಪ್ತಿಯಾದ ಸರಾಯಿಯನ್ನು ನೋಡಿದಲ್ಲಿ ತಾನು ಗುರ್ತಿಸುವುದಾಗಿಯೂ ತನ್ನ ಸಮಕ್ಷಮದಲ್ಲಿ ಇನ್ನೊಬ್ಬ ಪಂಚನು ಸಹಿ ಮಾಡಿದ್ದುದಾಗಿ ತಿಳಿಸಿ ನಿಶಾನೆ ಪಿ-1 ರಲ್ಲಿರುವ ಆತನ ಸಹಿಯನ್ನು ಗುರ್ತಿಸಿರುತ್ತಾರೆ. ಅಲ್ಲದೇ ಈ ಸಾಕ್ಷಿದಾರ ಜಪ್ತಿಯಾದ ವಾಹನ ಹಾಗೂ ಸರಾಯಿಯನ್ನು ಗುರ್ತಿಸುವ ಬಗ್ಗೆ ತನ್ನ ಆಕ್ಷೇಪಣೆ ಇರುವುದಿಲ್ಲವಾಗಿ ಎದುರುದಾರರ ಪಕ್ಷದ ವಕೀಲರು ತಿಳಿಸಿರುತ್ತಾರೆ. ನಂತರ ಪಾಟೀ ಸವಾಲಿನಲ್ಲಿ ಸದ್ರಿ ದಿವಸ ತಾನು ಕಾರವಾರಕ್ಕೆ ತನ್ನ ಸ್ನೇಹಿತರಾದ ಬಿ. ಕೆ. ಉಪಾಧ್ಯಾಯ ಲೆಕ್ಚರರ ರವರನ್ನು ಕಾಣಲು ಬಂದಿದ್ದೆನೆಂದೂ, ತಾನು ಅಬಕಾರಿ ಗುತ್ತಿಗೆದಾರರಲ್ಲಿ ಮ್ಯಾನೇಜರರಾಗಿ ಕೆಲಸ ಮಾಡುತ್ತಿದ್ದೇನೆನ್ನುವುದು ಸರಿಯಲ್ಲವೆಂದೂ, 2003ನೇ ಸಾಲಿನಲ್ಲಿ ಜಿ.ಕೆ. ಸುಧಾನಳಿನಿ ಎಂಬುವರು ಅಬಕಾರಿ ಗುತ್ತಿಗೆದಾರರಾಗಿದ್ದರು ಎನ್ನುವ ವಿಷಯ ತನಗೆ ಗೊತ್ತಿಲ್ಲವೆಂದೂ, ನಿಶಾನೆ ಪಿ-1 ಯಾರ ಕೈಬರಹದಲ್ಲಿದೆ ಎಂಬುದು ತನಗೆ ಈಗ ನೆನಪಿಲ್ಲವೆಂದೂ, ಆದರೆ ಅದನ್ನು ಅಬಕಾರಿ ಅಧಿಕಾರಿಗಳು ಬರೆದಿರುತ್ತಾರೆಂದೂ, ಸದ್ರಿ ದಿವಸ ತಾವು ಅಬಕಾರಿ ಇಲಾಖೆಯ ಜೀಪಿನಲ್ಲಿ ಹೋಗಿದ್ದೆವು ಅದರ ನಂಬರ್ ಸ್ಪಷ್ಟವಾಗಿ ಈಗ ತನಗೆ ನೆನಪಿಲ್ಲವೆಂದೂ, ತನಗೆ ಕಾಜುಬಾಗದಿಂದ ಕರೆದುಕೊಂಡು ಹೋದರೆಂದೂ, ನಿಶಾನೆ ಪಿ-1 ರಲ್ಲಿ ತಾನು ತನ್ನ ಮುಖ್ಯ ವಿಚಾರಣೆಯಲ್ಲಿ ಹೇಳಿರುವ ಸಂಗತಿಗಳನ್ನು ಬರೆದಿರುತ್ತಾರೆಂದೂ, ಜಪ್ತು ಮಾಡಿಕೊಂಡ ವಾಹನದ ಇನ್ಸೂರೆನ್ಸ್ ಪಾಲಿಸಿ ನಂಬರನ್ನು ನಿಶಾನೆ ಪಿ-1ರಲ್ಲಿ ನಮೂದು ಮಾಡಿರುವ ವಿಷಯ ತನಗೆ ನೆನಪಿಲ್ಲವೆಂದೂ, ಸದ್ರಿ ವಾಹನದ ನೋಂದಣಿ ಪುಸ್ತಕದ ಸಂಖ್ಯೆ ತನಗೆ ನೆನಪಿಲ್ಲವೆಂದೂ, ವಾಹನದ ಆರ್. ಸಿ. ಪುಸ್ತಕದ ಸಂಖ್ಯೆಯನ್ನು ನಿಶಾನೆ ಪಿ-1 ರಲ್ಲಿ ನಮೂದ್ ಮಾಡಿದ ವಿಷಯ ಗೊತ್ತಿಲ್ಲವೆಂದೂ, ಆದರೆ ವಾಹನದ ಸಂಖ್ಯೆಯನ್ನು ನಮೂದು ಮಾಡಿದ ವಿಷಯ ತನಗೆ ಗೊತ್ತಿದೆ ಎಂದೂ, ಎಷ್ಟು ಕ್ಯಾನುಗಳು ಇದ್ದವೆಂದು ತನಗೆ ನೆನಪಿಲ್ಲವೆಂದೂ, ಸದ್ರಿ ದಿವಸ ಗೋವಾ ಕಡೆಯಿಂದ ಸುಮಾರು 10 ರಿಂದ 11 ಗಂಟೆಯವರೆಗೆ ಜೀಪು ಬಂದಿತೆಂದೂ, ಆ ದಿನ ಅಬಕಾರಿ ಅಧಿಕಾರಿಗಳು ಇದೇ ವಾಹನವನ್ನು ತಪಾಸಣೆಗಾಗಿ ಕಾಯುತ್ತಿದ್ದರೆಂದೂ, ಸದಾಶಿವಗಡದ ಕಟ್ಟಿಗೆ ಡಿಪೋ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿದೆಯೆಂದೂ, ರಾಷ್ಟ್ರೀಯ ಹೆದ್ದಾರಿಯಲ್ಲಿ ಬಹಳಷ್ಟು ವಾಹನಗಳು ಓಡಾಡುತ್ತವೆ ಎನ್ನುವುದು ಸರಿಯೆಂದೂ, ಗೋವಾದಿಂದ ಬರುವಂತಹ ವಾಹನಗಳು ಸುಮಾರು ಮೂರು ಚೆಕ್ ಪೋಸ್ಟ್‌ಗಳನ್ನು ದಾಟಿ ಬರಬೇಕಾಗುತ್ತದೆ ಎನ್ನುವುದು ಸರಿಯೆಂದೂ, ಅದರಲ್ಲಿ ಒಂದು ಚೆಕ್ ಪೋಸ್ಟ್ ಅಬಕಾರಿ ಇಲಾಖೆಯದು ಎನ್ನುವುದು ನನಗೆ ಗೊತ್ತಿಲ್ಲವೆಂದೂ, ತಾನು ಅಬಕಾರಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತಿದ್ದೇನೆನ್ನುವುದು ಸರಿಯಲ್ಲವೆಂದೂ, ತಾನು ಸದ್ರಿ ದಿವಸ ಕಾಜುಬಾಗದಲ್ಲಿರುವ ಉಫಾಧ್ಯಾಯ ರವರ ಮನೆಯಲ್ಲಿದ್ದೆನೆಂದೂ, ಯಾವುದೇ ಪಂಚ ತನ್ನ ಸಮಕ್ಷಮದಲ್ಲಿ ಪಂಚನಾಮೆ ಮಾಡಿಲ್ಲವೆನ್ನುವದು ಸರಿಯಲ್ಲವೆಂದೂ, ತಾನು ಪಂಚನಾಮೆಗೆ ಸದಾಶಿವಗಡ ಕಟ್ಟಿಗೆ ಡಿಪೋ ಹತ್ತಿರ ಸಹಿ ಮಾಡಲಿಲ್ಲವೆನ್ನುವುದು ಸರಿಯಲ್ಲವೆಂದೂ, ತಾನು ನಿಶಾನೆ ಪಿ-1ಕ್ಕೆ ಅಬಕಾರಿ ಕಚೇರಿಯಲ್ಲಿ ಸಹಿ ಮಾಡಿದ್ದೇನೆನ್ನುವುದು ಸರಿಯಲ್ಲವೆಂದೂ ಸದ್ರಿ ದಿವಸ ಸರಾಯಿ ಹಾಗೂ ಜೀಪನ್ನು ಜಪ್ತು ಮಾಡಿಲ್ಲವೆನ್ನುವುದು ಸರಿಯಲ್ಲವೆಂದೂ ಜಪ್ತಾದ ಸರಾಯಿ ಹಾಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆನ್ನುವುದು ಸರಿಯಲ್ಲವೆಂದೂ, ಜೀಪ್ ಚಾಲಕನಿಗೂ ಹಾಗೂ ಜಪ್ತಾದ ಗೋವಾ ಸರಾಯಿಗೂ ಯಾವುದೇ ಸಂಬಂಧವಿಲ್ಲವೆನ್ನುವುದು ಸರಿಯಲ್ಲವೆಂದೂ ಅಬಕಾರಿ ಅಧಿಕಾರಿಗಳು ಸಹಿ ಹಾಕು ಎಂದು ಹೇಳಿದ್ದಕ್ಕೆ ನಿಶಾನೆ ಪಿ-1ಕ್ಕೆ ಸಹಿ ಮಾಡಿದ್ದೇನೆ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

15. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ ಪಿಡಬ್ಲ್ಯೂ-3ನೇ ಯವರು ಪ್ರತಿಕೂಲ ಸಾಕ್ಷಿಯನ್ನು ನುಡಿದಿದ್ದರೂ ಸಹ ತನಗೆ ಯಾವುದೇ ಒಂದು ಪತ್ರವನ್ನು ಕೊಟ್ಟಾಗ ಅದನ್ನು ಓದಿ ನೋಡಿಯೇ ವಿಷಯ ಸತ್ಯವಿದ್ದಲ್ಲಿ ಮಾತ್ರ ಸಹಿ ಮಾಡುತ್ತೇನೆಂದೂ, ಸುಳ್ಳಾಗಿದ್ದಲ್ಲಿ ಸಹಿ ಮಾಡುವುದಿಲ್ಲವೆಂದೂ ಪಿಡಬ್ಲ್ಯೂ-1ನೇ ಯವರು ಬಲವಂತವಾಗಿ ತನ್ನ ಸಹಿ ಪಡೆದಿಲ್ಲವೆಂದೂ, ಅರ್ಜಿದಾರರಿಂದ ದುಡ್ಡು ಪಡೆದು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆನ್ನುವುದು ಸರಿಯಲ್ಲವೆಂದೂ, ಪ್ರಸನ್ನ ಹೆಗಡೆ ಇವರ ಪರಿಚಯವಿದೆಯೆಂದೂ ನುಡಿದಿದ್ದು, ಈ ಸಾಕ್ಷಿದಾರರ ಸಾಕ್ಷ್ಯವನ್ನು ನಂಬಲು ಬರುವುದಿಲ್ಲ. ಇನ್ನುಳಿದಂತೆ ಪಿಡಬ್ಲ್ಯೂ-4ನೇ ಯವರ ಬಾಯಿಯಿಂದ ಬಂದ ಶಬ್ದಗಳು ಅಭಿಯೋಜನೆ ಪಕ್ಷಕ್ಕೆ ಸಹಕಾರಿಯಾಗಿದ್ದು ಈ ಸಾಕ್ಷಿದಾರರು ಅಬಕಾರಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತಿದ್ದರೆಂಬುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲ. ಪ್ರಕರಣ ದಾಖಲಾಗಿ ಒಂದು ವರ್ಷದ ನಂತರ ಸಾಕ್ಷಿ ನುಡಿದಿರುವುದರಿಂದ ಆ ದಿನ ಪ್ರಯಾಣಿಸಿದ ಜೀಪಿನ ಸಂಖ್ಯೆ ಮತ್ತು ಇನ್ಸೂರೆನ್ಸ್ ಪಾಲಿಸಿ ಸಂಖ್ಯೆ ನಮೂದಿಸಿದ ವಿಷಯವು ನೆನಪಿಲ್ಲದಿರಬಹುದಾಗಿದೆ. ಈ ಸಾಕ್ಷಿದಾರರು ಅಬಕಾರಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತಿದ್ದುದು ನಿಜವಾದಲ್ಲಿ ಗುತ್ತಿಗೆದಾರನಿಗೂ ಅರ್ಜಿದಾರರಿಗೂ ಯಾವ ಕಾರಣಕ್ಕಾಗಿ ದ್ವೇಷವಿದೆ ಎಂಬುದನ್ನು ವಿವರಿಸಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಈ ಘಟನೆ ಸಂಭವಿಸಿರುವುದನ್ನು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸಿರುವುದು ಕಂಡುಬರುತ್ತದೆ.

16. ದಿನಾಂಕ: 3.11.2004 ರಂದು ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರಾದ ಶ್ರೀಮತಿ ಮಾಯಾ ಮಾರುತಿ ನಾಯ್ಕ್ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಡಿ.ಡಬ್ಲ್ಯೂ-1 ರಂತೆ ಸಾಕ್ಷಿ ನುಡಿಯುತ್ತಾ, ತಾನು ಮಹೀಂದ್ರಾ ಜೀಪ್ ಸಂಖ್ಯೆ: ಕೆಎ-30/ಎಂ-2072 ನೇದರ ಆರ್.ಸಿ. ಮಾಲೀಕಳಾಗಿರುತ್ತೇನೆಂದೂ, ಹಾಗೂ ಸದ್ರಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸಿರುತ್ತೇನೆಂದೂ, ತಾನು ಸದ್ರಿ ಹಳೆಯ ಜೀಪನ್ನು ಎರಡು ವರ್ಷಗಳ ಹಿಂದೆ ಖರೀದಿಸಿದ್ದೆನೆಂದೂ, ತನ್ನ ಪತಿ ಕೆ.ಎಸ್.ಆರ್.ಟಿ.ಸಿ.ಯಲ್ಲಿ ಬಸ್ ಚಾಲಕರಾಗಿದ್ದರೆಂದೂ, ಅವರು ಬಸ್ಸನ್ನು ಅಪಘಾತಕ್ಕೊಳಪಡಿಸಿದಾಗ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದರೆಂದೂ, ಆನಂತರ ತಮ್ಮ ಜೀವನ ನಿರ್ವಹಣೆಗಾಗಿ ಸದ್ರಿ ಜೀಪನ್ನು ಖರೀದಿಸಿದ್ದೆನೆಂದೂ, ಸದ್ರಿ ಜೀಪನ್ನು ತನ್ನ ಪತಿಯೇ ಚಲಾಯಿಸುತ್ತಿದ್ದರೆಂದೂ, ಅದನ್ನು ಎಲ್. ಆ್ಯಂಡ್.ಟಿ ಸೀಬರ್ಡ್‌ನಲ್ಲಿ ನಡೆಯುವ ಕಾಮಗಾರಿಯ ಗುತ್ತಿಗೆದಾರರ ಕೆಳಗೆ ಅವರ ಕೆಲಸದವರನ್ನು ಕರೆದುಕೊಂಡು ಹೋಗಿ ಬರಲು ಉಪಯೋಗಿಸಲಾಗುತ್ತಿತ್ತೆಂದೂ ಈ ವಾಹನವನ್ನು ಕಾರವಾರದಿಂದ ಸೀಬರ್ಡ್ ಸೈಟಿಗೆ ಮತ್ತು ಕೆಲವೊಮ್ಮೆ ತಿಂಗಳಿಗೊಮ್ಮೆ ಎರಡು ತಿಂಗಳಿಗೊಮ್ಮೆ ಕಾರವಾರದಿಂದ ಮಡಗಾಂವ ರೇಲ್ವೆ ಸ್ಟೇಷನ್ನಿಗೆ ಹೋಗುವುದಕ್ಕಾಗಿ ಬಳಸಲಾಗುತ್ತಿತ್ತೆಂದೂ, ಸದ್ರಿ ಗುತ್ತಿಗೆದಾರರು ಓರಿಸ್ಸಾದವರಾಗಿದ್ದು, ಅವರು ಒಮ್ಮೊಮ್ಮೆ ಓರಿಸ್ಸಾಕ್ಕೆ ಹೋಗುವಾಗ ಮಡಗಾಂವದಿಂದ ರೇಲ್ವೆ ಮೂಲಕ ಹೋಗುತ್ತಿದ್ದರೆಂದೂ ಆ ಗುತ್ತಿಗೆದಾರರಲ್ಲಿ ಎಲ್ಲ ಕೆಲಸಗಾರರು ಗಂಡಸರೇ ಆಗಿದ್ದರು. ಹೆಂಗಸರ್‍ಯಾರು ಇರಲಿಲ್ಲವೆಂದೂ ದಿನಾಂಕ: 26.07.2003 ರಂದು ತನ್ನ ಪತಿ ಮಡಗಾಂವಕ್ಕೆ ಹೋಗಿ ಅಲ್ಲಿಂದ ಬರುತ್ತಿದ್ದರೆಂದೂ, ಈ ಜೀಪಿನಲ್ಲಿ ತನ್ನ ಪತಿ ಬಿಟ್ಟು ಇನ್ನೊಬ್ಬ ಗುತ್ತಿಗೆದಾರರು ಇದ್ದರೆಂದೂ ಮಡಗಾಂವದಿಂದ ಕಾರವಾರಕ್ಕೆ ಎರಡು ಚೆಕ್ ಪೋಸ್ಟ್‌ಗಳನ್ನು ದಾಟಿ ಬರುತ್ತಿರುವಾಗ ಭದ್ರಾ ಹೊಟೇಲ್ ಹತ್ತಿರ ಪೊಲೀಸರು ಸದ್ರಿ ವಾಹನವನ್ನು ತಡೆದು ನಿಲ್ಲಿಸಿದರು ಎಂದು ತನ್ನ ಪತಿ ತಿಳಿಸಿರುತ್ತಾರೆಂದೂ, ಪೊಲೀಸರು ಎಲ್ಲ ವಾಹನವನ್ನು ನಿಲ್ಲಿಸುತ್ತಿದ್ದಂತೆ ತಮ್ಮ ವಾಹನವನ್ನು ನಿಲ್ಲಿಸಿದರು ಮತ್ತು ವಾಹನದ ದಾಖಲೆಗಳನ್ನು ಕೇಳಿದರು. ಆಗ ವಾಹನದ ದಾಖಲೆ ತೋರಿಸಲಾಯಿತೆಂದೂ ತನ್ನ ಪತಿ ತಿಳಿಸಿರುತ್ತಾರೆ. ನಂತರ ಪೊಲೀಸರು ತಮ್ಮ ವಾಹನವನ್ನು ಕಾಜುಭಾಗದ ಅಬಕಾರಿ ಕಛೇರಿಯ ಹತ್ತಿರ ತರಲು ಹೇಳಿದರೆಂದೂ, ಅಲ್ಲಿ ಒಂದು ಸುಳ್ಳು ಅಬಕಾರಿ ಪ್ರಕರಣವನ್ನು ದಾಖಲು ಮಾಡಿ ವಾಹನವನ್ನು ಜಪ್ತು ಮಾಡಿದರೆಂದೂ, ಈ ವಿಷಯವನ್ನು ತನ್ನ ಪತಿ ತನಗೆ ತಿಳಿಸಿದ್ದಾರೆಂದೂ ತಮ್ಮ ಜೀಪಿನಲ್ಲಿ ಘಟನೆ ಸಂಭವಿಸಿದ ದಿನ ಹೆಂಗಸರ್‍ಯಾರು ಇರಲಿಲ್ಲವೆಂದೂ ಈ ಜೀಪಿನಲ್ಲಿ ಅನಧಿಕೃತ ಸರಾಯಿ ಇರಲಿಲ್ಲವೆಂದೂ, ತಮ್ಮ ಮೇಲಾಗಲೀ ನನ್ನ ಪತಿಯ ಮೇಲಾಗಲೀ ಈ ಹಿಂದೆ ಅನಧಿಕೃತ ಸರಾಯಿಯ ವ್ಯವಹಾರದ ಬಗ್ಗೆ ಯಾವುದೇ ಗುನ್ಹೆ ದಾಖಲಾಗಿದ್ದು ಇರುವುದಿಲ್ಲವೆಂದೂ, ಸಾಮಾನ್ಯವಾಗಿ ತನ್ನ ಪತಿ ತನ್ನ ವ್ಯವಹಾರದ ಬಗ್ಗೆ ಎಲ್ಲ ವಿಷಯವನ್ನು ತನಗೆ ಹೇಳುತ್ತಿರುತ್ತಾರೆಂದೂ, ತನ್ನ ಪತಿ ಸರಾಯಿ ಸಾಗಾಟ ಮಾಡಿರುವುದಿಲ್ಲವೆಂದೂ, ತನ್ನ ಪತಿ ಖಾನಾಪುರ ಕೆ.ಎಸ್.ಆರ್.ಟಿ.ಸಿ. ಡಿಪೋದಲ್ಲಿ ಪುನಃ ಕೆಲಸ ಮಾಡುತ್ತಿದ್ದಾರೆಂದೂ, ಪ್ರಾಧಿಕಾರದಿಂದ ಮಧ್ಯಂತರ ವಶಕ್ಕೆ ಬಿಡಿಸಿಕೊಂಡ ಜೀಪು ಈಗ ತನ್ನ ಮನೆಯಲ್ಲಿದೆ ಅದನ್ನು ಈಗ ಯಾರೂ ನಡೆಸುವುದಿಲ್ಲವೆಂದೂ, ಜೀಪನ್ನು ತನ್ನ ಮನೆಯವರು ಇಲ್ಲಿಗೆ ಬಂದಾಗ ಉಪಯೋಗಿಸುತ್ತಾರೆಂದೂ, ಅದನ್ನು ಈ ಪ್ರಾಧಿಕಾರದ ಮುಂದೆ ತರುವುದನ್ನು ಬಿಟ್ಟು ಬೇರೆ ಎಲ್ಲಿಯೂ ಉಪಯೋಗಿಸುವದಿಲ್ಲವೆಂದೂ, ತನ್ನ ಜೀಪಿನ ಮೇಲೆ ಹೊರಿಸಿರುವ ಆರೋಪವು ಸುಳ್ಳಾಗಿರುತ್ತದೆಂದೂ, ಜೀಪಿನ ಬಗ್ಗೆ ತಯಾರಿಸಲಾದ ಪಂಚನಾಮೆ ವಗೈರೆ ಸುಳ್ಳಾಗಿರುತ್ತದೆಂದೂ. ಆದುದರಿಂದ ತನ್ನ ಜೀಪನ್ನು ಶಾಶ್ವತವಾಗಿ ತನಗೆ ಬಿಡುಗಡೆ ಮಾಡಲು ಆದೇಶಿಸಬೇಕಾಗಿ ವಿನಂತಿಸಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ.ಯವರ ಪಾಟಿ ಸವಾಲಿನಲ್ಲಿ ಮಾರುತಿ ತಂದೆ ಲಕ್ಷ್ಮಣ ನಾಯ್ಕ ಇವರು ತನ್ನ ಯಜಮಾನ ರಾಗಿರುತ್ತಾರೆಂದೂ, ದಿನಾಂಕ: 26.07.2003 ರಂದು ಸದಾಶಿವಗಡ ರಾಷ್ಟ್ರೀಯ ಹೆದ್ದಾರಿಯ ಕಟ್ಟೆಗೆಯ ಡಿಪೋ ಹತ್ತಿರ ತನ್ನ ಗಂಡ ತನ್ನ ವಾಹನದ ಸಂಖ್ಯೆ: ಕೆಎ-30/ಎಂ-2072 ರಲ್ಲಿ ಅಕ್ರಮವಾಗಿ ಗೋವಾದಿಂದ ಸರಾಯಿ ಸಾಗಾಟ ಮಾಡುತ್ತಿದ್ದ ಬಗ್ಗೆ ಪ್ರಕರಣವನ್ನು ದಾಖಲು ಮಾಡಿದ್ದು ಇರುತ್ತದೆ. ಅದೇ ರೀತಿ ಈ ಪ್ರಕರಣದಲ್ಲಿ ವಾಹನವನ್ನು ಸಹ ಜಪ್ತು ಮಾಡಿರುತ್ತಾರೆ. ಆ ಪ್ರಕರಣವು ಕ್ರಿಮಿನಲ್ ನ್ಯಾಯಾಲಯದಲ್ಲಿ ಇನ್ನೂ ನಡೆಯುತ್ತಾ ಇದೆ. ಅಬಕಾರಿ ಉಪ ನಿರೀಕ್ಷಕರಾದ ಸಾವಂತ ಇವರಿಗೆ ತನ್ನ ಮೇಲಾಗಲಿ ತನ್ನ ಯಜಮಾನರ ಮೇಲಾಗಲೀ ಯಾವುದೇ ರೀತಿಯ ದ್ವೇಷ ಇರುವುದಿಲ್ಲವೆಂದೂ, ಅದೇ ರೀತಿ ಸುಳ್ಳು ಕೇಸು ಹಾಕುವಂತಹ ಅಗತ್ಯತೆ ಕೂಡ ಅವರಿಗೆ ಇರುವುದಿಲ್ಲವೆಂದೂ ಮುಖ್ಯ ವಿಚಾರಣೆಯಲ್ಲಿ ತಾನು ನುಡಿದ ಸಾಕ್ಷಿಯು ನನ್ನ ಯಜಮಾನರು ತನಗೆ ಹೇಳಿದ್ದಾಗಿರುತ್ತದೆಂದೂ, ಘಟನೆ ಸಂಭವಿಸಿದಾಗ ತಾನು ಅಲ್ಲಿರಲಿಲ್ಲವೆಂದೂ, ಈ ವಿಷಯ ನನ್ನ ಯಜಮಾನರು ಹೇಳಿದ್ದು ಅದು ಸತ್ಯ ಅಥವಾ ಸುಳ್ಳು ಎನ್ನುವ ಬಗ್ಗೆ ತಾನು ಬೇರೆಯವರಿಂದ ತಿಳಿದುಕೊಂಡಿರುವುದಿಲ್ಲವೆಂದೂ ವಾಹನವನ್ನು ಬಾಡಿಗೆಗೆ ನೀಡಿದ್ದರ ಬಗ್ಗೆ ಯಾವುದೇ ರೀತಿಯ ಕರಾರು ಪತ್ರ ಅಥವಾ ದಾಖಲೆಗಳು ತನ್ನಲ್ಲಿ ಇರುವುದಿಲ್ಲವೆಂದೂ, ತನ್ನ ಯಜಮಾನರು ತನ್ನ ವಾಹನದಲ್ಲಿ ಅಕ್ರಮವಾಗಿ ಸರಾಯಿ ಸಾಗಾಟ ಮಾಡಿದ್ದಾರೆ ಎನ್ನುವುದು ಸುಳ್ಳೆಂದೂ, ವಾಹನವನ್ನು ಶಾಶ್ವತವಾಗಿ ಬಿಡುಗಡೆ ಮಾಡಿಕೊಳ್ಳುವುದಕ್ಕಾಗಿ ಪ್ರಾಧಿಕಾರದ ಮುಂದೆ ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದೂ, ತನ್ನ ಯಜಮಾನರು ಸತ್ಯವನ್ನು ಮುಚ್ಚಿಟ್ಟು ಸುಳ್ಳು ನುಡಿದಿದ್ದಾರೆ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**17. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಜೀಪನ್ನು ಎಲ್ ಆ್ಯಂಡ ಟಿ. ಕಂಪನಿ ಹಾಗೂ ಸೀಬರ್ಡ್‌ನಲ್ಲಿ ನಡೆಯುವ ಕಾಮಗಾರಿಯ ಗುತ್ತಿಗೆದಾರರ ಕೆಳಗೆ ಅವರ ಕೆಲಸದವರನ್ನು ಕರೆದುಕೊಂಡು ಹೋಗಲು ಬಳಸಲಾಗುತ್ತಿತ್ತೆನ್ನುವ ಬಗ್ಗೆ ಎದುರುದಾರರ ಪಕ್ಷದವರು ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ ದಿನಾಂಕ: 26.7.2003 ರಂದು ಸದರಿ ಜೀಪು ಗೋವಾ ರಾಜ್ಯದ ಮಡಗಾಂವ್ ರೇಲ್ವೇ ನಿಲ್ದಾಣಕ್ಕೆ ಹೋದ ಬಗ್ಗೆ ಯಾವುದೇ ದಾಖಲೆಗಳಿಲ್ಲ. ಮದ್ಯವನ್ನು ಎಲ್ಲಾ ಚೆಕ್ ಪೋಸ್ಟ್‌ಗಳನ್ನು ದಾಟಿ ಬಂದ ನಂತರ ಸಿಗುವಂತಹ ಅಕ್ರಮ ಮದ್ಯ ಮಾರಾಟದ ಕೇಂದ್ರಗಳಿಂದ ತರುವ ಸಾಧ್ಯತೆಗಳಿವೆ. ಈ ಪ್ರಕರಣದ ವಾಹನ ಚಾಲಕನಾದ ಆರೋಪಿಯು ಅರ್ಜಿದಾರರ ಪತಿಯಾಗಿರುವುದರಿಂದ ಅತನ ಸಾಕ್ಷ್ಯವನ್ನು ನುಡಿಸಬಹುದಾಗಿದ್ದರೂ ಸಹ ಅವರ ಪರ ಹೇಳಿಕೆಯನ್ನು ಈ ಅರ್ಜಿದಾರರು ನೀಡುವುದು ಸಮಂಜಸವಲ್ಲ. ಏಕೆಂದರೆ ಅರ್ಜಿದಾರರು ಈ ಕೃತ್ಯವು ತನ್ನ ಗಮನಕ್ಕೆ ಬಾರದೇ ಮತ್ತು ತಾನು ಶಾಮೀಲಾಗದೇ ನಡೆದಿದೆ ಎನ್ನುವುದನ್ನು ಸಾಬೀತುಪಡಿಸಬೇಕೆ ಹೊರತು ಇತರರು ಭಾಗಿಯಾಗದಿರುವುದನ್ನಲ್ಲ.

ಅಲ್ಲದೇ ಅರ್ಜಿದಾರರು ಜೀಪನ್ನು ತನ್ನ ಪತಿ ನಡೆಸುತ್ತಿರುವುದು ಮತ್ತು ಆ ದಿನ ಫಿರ್ಯಾದಿಕಡೆಯವರು ಸ್ಥಳದಲ್ಲಿ ಜೀಪನ್ನು ಜಪ್ತುಮಾಡಿಕೊಂಡಿರುವುದನ್ನು ತಾನೆ ಒಪ್ಪಿಕೊಂಡಿರುತ್ತಾರೆ ಅಲ್ಲದೇ ಫಿರ್ಯಾದುದಾರರಿಗೆ ತನ್ನ ಮೇಲಾಗಲೀ ತನ್ನ ಯಜಮಾನರ ಮೇಲಾಗಲೀ ಯಾವುದೇ ರೀತಿಯ ವೈಯಕ್ತಿಕ ದ್ವೇಶ ಇಲ್ಲದಿರುವುದನ್ನು ಸಹ ಒಪ್ಪಿಕೊಂಡಿರುತ್ತಾರೆ. ಹಾಗೂ ಸುಳ್ಳು ಪ್ರಕರಣವನ್ನು ದಾಖಲಿಸುವಂತಹ ಅಗತ್ಯತೆ ಕೂಡ ಅವರಿಗೆ ಇಲ್ಲದಿರುವುದನ್ನು ಸಹ ಒಪ್ಪಿಕೊಂಡಿರುತ್ತಾರೆ ತನ್ನ ಯಜಮಾನರು ಘಟನೆಯ ಬಗ್ಗೆ ತನಗೆ ಹೇಳಿದ ವಿಷಯ ಸತ್ಯ ಅಥವಾ ಸುಳ್ಳು ಎನ್ನುವ ಬಗ್ಗೆ ತಾನು ಬೇರೆಯವರಿಂದ ತಿಳಿದುಕೊಂಡಿಲ್ಲದ್ದನ್ನು ಸಹ ಒಪ್ಪಿಕೊಂಡಿರುತ್ತಾರೆ. ಅಲ್ಲದೇ ಗೌರವಾನ್ವಿತ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ಇತ್ತೀಚಿನ ತೀರ್ಪು ಕ್ರಿಮಿನಲ್ ರಿವಿಜನ್ ಪಿಟೀಷನ್ ಸಂಖ್ಯೆ: 1117/2004, ದಿನಾಂಕ: 11.08.2004 (ಶ್ರೀ ಮಹಮ್ಮದ್ ಅಲಿ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

"It cannot be said that the owner of the lorry did not have knowledge of the materials being transported by him in the lorry illegally, because the owner himself was driving the lorry in question"

ಈ ಪ್ರಕರಣದಲ್ಲಿಯೂ ಸಹ ಆರೋಪಿಯು ಅರ್ಜಿದಾರಳ ಪತಿಯಾಗಿದ್ದು ಆತನ ಸಹಮತಿಯಿಂದಲೇ ಈ ವಾಹನದಲ್ಲಿ ಅಕ್ರಮ ಸರಾಯಿ ಸಾಗಿಸಿರುವುದು ಖಚಿತವಾಗುತ್ತದೆ. ಆದುದರಿಂದ ಎರಡನೇಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 62/2001 ದಿನಾಂಕ: 15.07.2004, ಕ್ರಿಮಿನಲ್ ಅಪೀಲ್ ಸಂಖ್ಯೆ: 181/2001, ದಿನಾಂಕ: 5.10.2004 ಹಾಗೂ ಕ್ರಿಮಿನಲ್ ಅಪೀಲ್ ಸಂ. 2/2002 ದಿನಾಂಕ: 14/12/2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ಜೀಪನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಾರವಾರ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರ ಗುನ್ಹೆ ಸಂಖ್ಯೆ: 2/2003-04, ದಿನಾಂಕ: 26.07.2003 ರಲ್ಲಿ ಜಪ್ತಿಯಾದಂತಹ ಮಹೀಂದ್ರಾ ಕಮಾಂಡರ್ ಜೀಪ್ ಸಂ: ಕೆಎ-30/ಎಂ-2072 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/54/2003-04, ದಿನಾಂಕ: 20.01.2004 ನೇದರಂತೆ ಈ ಪ್ರಕರಣದಲ್ಲಿ ಜೀಪನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಡಿಸೆಂಬರ್ ತಿಂಗಳ 21ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು).

**ಎ. ಎಸ್. ವಿಶ್ವರೂಪ**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1 :- ಸಿ. ಎನ್. ಸಾವಂತ್, ಅ.ಉ.ನಿ.
ಪ್ರಾ.ಸಾ.ನಂ. 2 :- ಬಿ. ಎಂ. ಖಾಂಡೇಕರ, ಅ.ಉ.ನಿ.
ಪ್ರಾ.ಸಾ.ನಂ. 3 :- ನಾಗರಾಜ ತಿಮ್ಮೇಗೌಡ
ಪ್ರಾ.ಸಾ.ನಂ. 4 :- ಪ್ರಸನ್ನ ಕೃಷ್ಣ ಹೆಗಡೆ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯು 1 :- ಮಾಯಾ ಮಾರುತಿ ನಾಯ್ಕ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ 1 :- ಪಂಚನಾಮೆ
ನಿಶಾನೆ ಪಿ 1ಎ :- ಫಿರ್ಯಾದಿಯ ಸಹಿ
ನಿಶಾನೆ ಪಿ 1ಬಿ :- ಪಂಚಸಾಕ್ಷಿ ನಂ. 1ನೇಯವರ ಸಹಿ
ನಿಶಾನೆ ಪಿ 2 :- ಪ್ರ.ಮಾ. ವರದಿ
ನಿಶಾನೆ ಪಿ 2ಎ :- ಫಿರ್ಯಾದಿಯ ಸಹಿ
ನಿಶಾನೆ ಪಿ 3 :- ಸ್ವತ್ತಿನ ಪಟ್ಟಿ
ನಿಶಾನೆ ಪಿ 4 :- ರಾಸಾಯನಿಕ ವಿಶ್ಲೇಷಣಾ ವರದಿ.

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಎ. ಎಸ್. ವಿಶ್ವರೂಪ**

ಪಿ.ಆರ್.164 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**
**ಪ್ರಕಟಣೆ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ: ಎಫ್:17:2005 ದಿನಾಂಕ: 17ನೇ ಜನವರಿ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1. ರಾಜಪ್ಪ @ ರಾಜಣ್ಣಾ ತಂದೆ ಕಾಶೀನಾಥ ಸುತಾರ R/o ಗುಲ್ಬರ್ಗಾ
2. ಶ್ರೀಮತಿ ಶ್ರೀದೇವಿ ಗಂಡ ರಾಜಪ್ಪ @ ರಾಜಣ್ಣಾ ಸುತಾರ R/o ಗುಲ್ಬರ್ಗಾ

1. ಶ್ರೀ ವೆಂಕಟೇಶ ತಂದೆ ದತ್ತಾತ್ರೇಯ ಶಾಸ್ತ್ರಿ ಲಾರಿ ಮಾಲೀಕರು ಶ್ರೀ ದತ್ತಧಾಮಾ ಭಗವತಿನಗರ ಗುಲ್ಬರ್ಗಾ
2. ದಿ ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸುರೆನ್ಸ್ ಕಂ.ಲಿ. ಗುಲ್ಬರ್ಗಾ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ:ಶ್ರೀ:ಶ್ರೀಮತಿ: ಶಿವಾನಂದ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 21.12.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ: ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ: ಗಾಯ: ವಾರಸುದಾರ ರಾದ ಶ್ರೀ:ಶ್ರೀಮತಿ: ರಾಜಪ್ಪ ಮತ್ತು ಶ್ರೀದೇವಿ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ:ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್.166 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ಹಾಸನ ಜಿಲ್ಲೆ, ಹಾಸನ**
**ಸಂ: ಕಾಪಕಾ:ಎಫ್:ಎಸ್ಆರ್-59:2004**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಲಕ್ಷ್ಮಮ್ಮ ಕೋಂ ಶಿವಣ್ಣ, 45 ವರ್ಷ
2. ಶ್ರೀ ಶಿವಣ್ಣ ಬಿನ್ ದಾಸಪ್ಪ, 50 ವರ್ಷ
ವಾಸ: ನಾರಾಯಣಘಟ್ಟಹಳ್ಳಿ ಗ್ರಾಮ, ತಳಲೂರು ಅಂಚೆ, ಅರಸೀಕೆರೆ ತಾಲ್ಲೂಕು.

ಶ್ರೀ ರಘುನಂದನ್ ಜೆ. ಅಂಬರ್‌ಕರ್ ಬಿನ್ ಜಯಪ್ರಕಾಶ್ ಯು. ಅಂಬರ್‌ಕರ್
ಶ್ರೀ ಇಂಡಸ್ಟ್ರೀಸ್ ಫ್ಯಾಕ್ಟರಿ, ಚನ್ನರಾಯಪಟ್ಟಣ ರಸ್ತೆ, ಅರಸೀಕೆರೆ.

**ಪ್ರಕಟಣೆ**

ವಿಜಯಕುಮಾರಿ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 27.07.2004 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್.167 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ತುಮಕೂರು ಜಿಲ್ಲೆ, ತುಮಕೂರು**
**ಸಂ: ಕಾಅತು:ಕಾಪಕಾ:ಸಿಆರ್-96:2004 ದಿನಾಂಕ: 10ನೇ ನವೆಂಬರ್ 2004**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಜಯಮ್ಮ W/o ಲೇಟ್ ಶ್ರೀನಿವಾಸ ವಯಸ್ಸು, 46 ವರ್ಷ
2. ಎಸ್. ಸ್ವಾಮಿ S/o ಲೇಟ್ ಶ್ರೀನಿವಾಸ ವಯಸ್ಸು 28 ವರ್ಷ
3. ಎಸ್. ಸೌಭಾಗ್ಯ D/o ಲೇಟ್ ಟಿ. ಶ್ರೀನಿವಾಸ ವಯಸ್ಸು 25 ವರ್ಷ
R/o C/o B. ನಾರಾಯಣ (KSRTC)
ಚನ್ನಬಸವೇಶ್ವರ ನಗರ, ಫ್ಲೋರ್ ಮಿಲ್ ರೋಡ್,
ಉಪ್ಪಾರಹಳ್ಳಿ ತುಮಕೂರು.

1. ದಿ. ಕಮೀಶನರ್ ಮೈಸೂರು ಸಿಟಿ ಕಾರ್ಪೋರೇಶನ್ ವಾಣಿ ವಿಲಾಸ ವಾಟರ್ ವರ್ಕ್ಸ್ ಮೈಸೂರು.
2. ದಿ. ಅಸಿಸ್ಟೆಂಟ್ ಇಂಜಿನೀಯರ್ ವಾಣಿ ವಿಲಾಸ ವಾಟರ್ ವರ್ಕ್ಸ್ ಮೈಸೂರು ಸಿಟಿ ಕಾರ್ಪೋರೇಶನ್ ಮೈಸೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಜಯಮ್ಮ ಇವರು ತಮ್ಮ ಯಜಮಾನರಾದ ಟಿ. ಶ್ರೀನಿವಾಸ ಇವರು ಪ್ರತಿವಾದಿ ದಿ. ಕಮೀಶನರ್ ಮೈಸೂರು ಸಿಟಿ ಕಾರ್ಪೋರೇಶನ್ ವಾಣಿ ವಿಲಾಸ ವಾಟರ್ ವರ್ಕ್ಸ್, ಮೈಸೂರು ಇವರ ಸಂಸ್ಥೆಯಲ್ಲಿ ಕಾರ್ಮಿಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 19.8.2003 ರಂದು ಉದ್ಯೋಗ ಸಮಯದಲ್ಲಿ ಕ್ಲಾಮ್ ಪೆಕ್ಯುಲೇಟರ್ ಆಪರೇಟ್ ಮಾಡುವಾಗ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್.168 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ತುಮಕೂರು ಜಿಲ್ಲೆ, ತುಮಕೂರು**
**ಸಂ: ಕಾಅತು:ಕಾಪಕಾ:ಸಿಆರ್-97:2004 ದಿನಾಂಕ: 30ನೇ ನವೆಂಬರ್ 2004**

**ಅರ್ಜಿದಾರರು :**
1. ಅಮೀರ್ ಸಾಬ್ @ ಬಾಶಾಸಾಬ್ S/o ಖಲಂದರ್ ಸಾಬ್, 65 ವರ್ಷ
2. ದಿಲ್‌ಶಾದ್ W/o ಅಮೀರ್‌ಸಾಬ್ @ ಬಾಶಾಸಾಬ್ 50 ವರ್ಷ
R/o ಗುರುಗದಹಳ್ಳಿ ಜನತಾಹೌಸ್ ಹೊನ್ನವಳ್ಳಿ ಹೋಬಳ್ಳಿ, ತಿಪಟೂರು ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಸೈಯ್ಯದ್ ನವಾಬ್ S/o ಸೈಯ್ಯದ್ ಸುಲೇಮಾನ್ 2ನೇ ಕ್ರಾಸ್, ಭೋವಿ ಕಾಲೋನಿ ಗಾಂಧಿನಗರ ತಿಪಟೂರು ತುಮಕೂರು ಜಿಲ್ಲೆ.
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಬ್ರ್ಯಾಂಚ್ ಆಫೀಸ್ ಜಯದೇವ ಹಾಸ್ಟೆಲ್ ಬಿಲ್ಡಿಂಗ್ ಬಿ. ಎಚ್. ರೋಡ್ ತಿಪಟೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಅಮೀರ್ ಸಾಬ್ @ ಬಾಶಾಸಾಬ್ ಇವರು ತಮ್ಮ ಮಗನಾದ ಮಜಹರ್ ಪಾಶಾ ಇವರು ಪ್ರತಿವಾದಿ-1 ಇವರ ಕೆಎ-37-757 ಲಾರಿಯಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 5.11.2004 ರಂದು ಉದ್ಯೋಗ ಸಮಯದಲ್ಲಿ ಪನಂಬೂರ್ N.M.P.T. ತಣ್ಣೀರ್ ಬಾವಿ ರಸ್ತೆ ಮಂಗಳೂರು ತಾ: ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್.169 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು.

**ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು**

**ವಿಷಯ :** 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಅಭ್ಯರ್ಥಿಯಾಗಿದ್ದ ಶ್ರೀ ಬನ್ನೆಪ್ಪ ಮಲ್ಲಪ್ಪ ಕಲಗುಡಿ, ಎಪಿಸಿ 98, ಡಿಎಆರ್ ಪೊಲೀಸು ಕೇಂದ್ರ ಸ್ಥಾನ ಬಾಗಲಕೋಟೆ ಇವರು ಪರೀಕ್ಷೆಯಲ್ಲಿ ನಡೆಸಿದ ದುರಾಚಾರದ ಬಗ್ಗೆ.

**ಓದಲಾಗಿದೆ :**
1. ಶ್ರೀ ಬನ್ನೆಪ್ಪ ಮಲ್ಲಪ್ಪ ಕಲಗುಡಿ ಇವರ ಅರ್ಜಿ.
2. ಅನಾಮಧೇಯರ ಪತ್ರ ದಿನಾಂಕ: 26.07.2004.
3. ಪರೀಕ್ಷೆಯಲ್ಲಿ ಬರೆದಿದ್ದ ಕನ್ನಡ ಭಾಷಾ ಪತ್ರಿಕೆ-2ರ ಉತ್ತರ ಪತ್ರಿಕೆ.
4. ದಿನಾಂಕ: 30.08.2004 ರಂದು ಅಭ್ಯರ್ಥಿಗೆ ಜಾರಿ ಮಾಡಿದ ನೋಟೀಸು.
5. ದಿನಾಂಕ: 09.09.2004 ರಂದು ವಿಚಾರಣಾಧಿಕಾರಿಗಳ ಮುಂದೆ ನೀಡಿರುವ ಲಿಖಿತ ಹೇಳಿಕೆ.
6. ದಿನಾಂಕ: 22.09.2004 ರಂದು ಅಭ್ಯರ್ಥಿಗೆ ಜಾರಿ ಮಾಡಿದ ನೋಟೀಸು.
7. ಅಭ್ಯರ್ಥಿಯ ಸಮಜಾಯಿಷಿ ದಿನಾಂಕ: 5.10.2004.

ಆಯೋಗವು ನಡೆಸಿದ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಬನ್ನೆಪ್ಪ ಮಲ್ಲಪ್ಪ ಕಲಗುಡಿ, ಎಪಿಸಿ 98, ಡಿಎಆರ್ ಪೊಲೀಸು ಕೇಂದ್ರ, ಬಾಗಲಕೋಟೆ, ಇವರು ಸಲ್ಲಿಸಿದ್ದ ಅರ್ಜಿಯ ಮೇರೆಗೆ ನೋಂದಣಿ ಸಂಖ್ಯೆ:55012 ರಡಿ ದಿನಾಂಕ:01.07.2004 ರಂದು ಕನ್ನಡ ಭಾಷಾ ಪರೀಕ್ಷೆ ಬರೆಯಲು ಪ್ರವೇಶ ಪತ್ರ ಜಾರಿ ಮಾಡಲಾಗಿತ್ತು. ಅದರಂತೆ ಸದರಿ ಪರೀಕ್ಷೆಯನ್ನು ಸಹ ಬರೆದಿರುತ್ತಾರೆ.

ದಿನಾಂಕ: 2.10.2004 ರಂದು ಅನಾಮಧೇಯರು ಆಯೋಗಕ್ಕೆ ಸಲ್ಲಿಸಿದ್ದ ದೂರಿನ ಮೇರೆಗೆ ಅವರ ಕನ್ನಡ ಭಾಷಾ ಉತ್ತರ ಪತ್ರಿಕೆಗಳನ್ನು ಪರಿಶೀಲಿಸಿದಾಗ ದೂರಿನಲ್ಲಿ ಸತ್ಯಾಂಶವಿರುವುದು ಮೇಲ್ನೋಟಕ್ಕೆ ಸಾಬೀತಾದ ಹಿನ್ನೆಲೆಯಲ್ಲಿ ಖುದ್ದು ವಿಚಾರಣೆಗೆ ಹಾಜರಾಗುವಂತೆ ದಿನಾಂಕ: 30.08.2004ರ ರಂದು ಸದರಿಯವರಿಗೆ ನೋಟೀಸು ಜಾರಿ ಮಾಡಲಾಗಿತ್ತು. ಅವರು ದಿನಾಂಕ: 09.09.2004 ರಂದು ಆಯೋಗದ ಕಛೇರಿಗೆ ಖುದ್ದಾಗಿ ಹಾಜರಾಗಿ ನೀಡಿರುವ ಲಿಖಿತ ಹೇಳಿಕೆಯಲ್ಲಿ ತಮ್ಮ ತಪ್ಪನ್ನು ಒಪ್ಪಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ದಿನಾಂಕ: 22.09.2004 ರಂದು ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಸದರಿ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ಏಕೆ ರದ್ದು ಪಡಿಸಬಾರದೆಂದು ಕೇಳಲಾಗಿತ್ತು. ಇದಕ್ಕೆ ಅಭ್ಯರ್ಥಿಯು ಉತ್ತರಿಸಿ ತನ್ನ ತಪ್ಪಿನ ಅರಿವಾಗಿದ್ದು ದಯಮಾಡಿ ಕ್ಷಮಿಸಿ, ಫಲಿತಾಂಶ ಪ್ರಕಟಿಸುವಂತೆ ಕೋರಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಆಯೋಗವು ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇಪ (1)3790/04-05/ ಪಿಎಸ್‌ಸಿ ದಿನಾಂಕ: 24ನೇ ಜನವರಿ 2005**

ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿಗಳು 1965ರ ನಿಯಮ 14ರನ್ವಯ ಜಾರಿ ಮಾಡಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಡಳಿತ:398:93-04:ಪಿಎಸ್‌ಸಿ ದಿನಾಂಕ: 14.07.1993 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಶ್ರೀ ಬನ್ನೆಪ್ಪ ಮಲ್ಲಪ್ಪ ಕಲಗುಡಿ, ಎಪಿಸಿ 98, ಡಿಎಆರ್ ಪೊಲೀಸು ಕೇಂದ್ರ ಬಾಗಲಕೋಟೆ ಇವರಿಗೆ ಈ ಕೆಳಗಿನಂತೆ ದಂಡನೆ ವಿಧಿಸಿದೆ.

"2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ
ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸಿ ಡಿಬಾರ್ ಮಾಡಲಾಗಿದೆ"

ಆಯೋಗದ ಆದೇಶದ ಮೇರೆಗೆ

ಪಿ.ಆರ್.192 **ಬಿ. ಎಸ್. ರಾಮಪ್ರಸಾದ್**

ಕಾರ್ಯದರ್ಶಿ ಮತ್ತು ಪರೀಕ್ಷಾ ನಿಯಂತ್ರಕರು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು-560001.

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.

ಭೂಸ್ವಾಧೀನ ಕಾಯ್ದೆ ಕಲಂ 4 (1) ರ ಅನ್ವಯ ಅಧಿಸೂಚನೆಯ ಕ್ರಮಾಂಕ: ಕಗೃಮಂ.ಭೂಸ್ವಾವಿ.6/2/2004-05

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಗೃಹ ಮಂಡಳಿಯ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡುಬಂದಿದೆ.

1991 ನೇ ಸಾಲಿನ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4 (2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾದೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991 ನೇ ಇಸವಿ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3 ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು, ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರುರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ದಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಜಿಲ್ಲೆ: ಹಾಸನ ತಾಲ್ಲೂಕು: ಹಾಸನ ಹೋಬಳಿ: ಕಸಬಾ ಗ್ರಾಮ: ಹಾಸನ ಮತ್ತು ಚನ್ನಪಟ್ಟಣ**

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| | **ಹಾಸನ ಗ್ರಾಮ** | | | | | | | | | | |
| 1 | ಖರಾಬು | ಖರಾಬು | 4/3 | ಹಾಸನ | 0-02 | ಖರಾಬು | ಸರ್ವೆ. ನಂ. 6 ಹೆಚ್,ಎನ್. ಪುರ | ಸರ್ವೆ. ನಂ. 5/3A | ಸರ್ವೆ.ನಂ. 4/2, 5/3B | ಸರ್ವೆ. ನಂ.6, ಕಾಲುವೆ | - |
| 2 | ಖರಾಬು | ಖರಾಬು | 5/3A | ಹಾಸನ | 0-01 | ಖರಾಬು | ಸ.ನಂ. 4/3 | ಕಾಲುವೆ | ಸ.ನಂ. 5/3B | **ಕಾಲುವೆ** | - |
| 3 | ಸೂರ್ಯನಾರಾಯಣಪ್ಪ ಬಿನ್ ವೆಂಕಟಸುಬ್ಬಯ್ಯ | ಸೂರ್ಯ ನಾರಾಯಣಪ್ಪ | 6 | ಹಾಸನ | 0.03 | ಭಾಗಾಯ್ತು | ರಸ್ತೆ | ಕಾಲುವೆ | ಸ.ನಂ. **4/3,** 5/3ಎ | ಕಾಲುವೆ **ಸ.ನಂ.**7 | 0-61 |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 4 | ಜವರಮ್ಮ ಕೋಂ.ರಾಮೇಗೌಡ | ಜವರಮ್ಮ | 7 | ಹಾಸನ | 0.01 | ಭಾಗಾಯ್ತು | ರಸ್ತೆ | ಕಾಲುವೆ | ಕಾಲುವೆ | ಸರ್ವೆ ನಂ. 14/2ಎ, 14/2ಬಿ | 0-21 |
| 5 | ಸಿ.ಆರ್.ಶಿವಪ್ಪ ಬಿನ್ ಸಿ.ರಾಮೇಗೌಡ | ಸಿ.ಆರ್.ಶಿವಪ್ಪ | 8 | ಹಾಸನ | 0.09 | ತರಿ | ರಸ್ತೆ | ಸ.ನಂ.9 | ಸ.ನಂ.6 | ಸ.ನಂ 14/2A, 2ಬಿ | 0-41 |
| 6 | ಸಿ.ಆರ್.ಶಿವಪ್ಪ ಬಿನ್ ಸಿ.ರಾಮೇಗೌಡ | ಸಿ.ಆರ್.ಶಿವಪ್ಪ | 9 | ಹಾಸನ | 0.16 ಖ-0.05 | ಖುಷ್ಕಿ | ಸ.ನಂ.8 | ಸ.ನಂ. 10,13 | ಕಾಲುವೆ | ಸ.ನಂ. 14/2ಎ, 14/1ಎ | 0-55 |
| 7 | ಜವರಮ್ಮ ಕೋಂ. ನಂಜೇಗೌಡ, ಕೆ.ಎನ್.ತಿಮ್ಮೇಗೌಡ ಬಿನ್ ನಂಜೇಗೌಡ, ಹುಚ್ಚಮ್ಮ ಕೋಂ. ನಿಂಗೇಗೌಡ, ಶಾರದ, ಶಾಮಣ್ಣ ಕೋಂ. ಕಳಸ ಶಾಮಣ್ಣ ಕರೀಗೌಡ ಬಿನ್ ಅರಸೀಗೌಡ, ರುದ್ರೇಗೌಡ ಬಿನ್ ತಿಮ್ಮೇಗೌಡ ತಮ್ಮಣ್ಣಗೌಡ ಬಿನ್ ಜವರಮ್ಮ | ಜವರಮ್ಮ ಕೆ.ಎನ್.ತಿಮ್ಮೇಗೌಡ, ಹುಚ್ಚಮ್ಮ ಶಾರದ ಕರೀಗೌಡ ರುದ್ರೇಗೌಡ ತಮ್ಮಣ್ಣಗೌಡ | 12/1ಎ ಪೈಕಿ | ಹಾಸನ | 0.11 0.06 0.17 | ಖುಷ್ಕಿ ತರಿ | ಸ.ನಂ. 12/9 ಮತ್ತು 12/2 | ಕಾಲುವೆ | ಸ.ನಂ. 12/1ಬಿ | 12/5 12/6 | 0.33 0.28 |
| 8 | ಹೆಚ್.ಹೆಚ್. ಮಲ್ಲೇಗೌಡ ಉ: ತಮ್ಮಣ್ಣ ಬಿನ್ ಮೂಡ್ಲಿಗೌಡ, ಹೆಚ್.ಎಂ.ಮಲ್ಲೇಗೌಡ ಉ: ತಮ್ಮಣ್ಣ, ಸಣ್ಣಮ್ಮ ಕೋಂ. ಕೃಷ್ಣೇಗೌಡ, ರಾಮಕ್ಕ ಬಿನ್. ಹೆಚ್.ಎಂ.ತಿಮ್ಮಣ್ಣ ತಿಮ್ಮಮ್ಮ ಕೋಂ. ಲೇ:ಪುಟ್ಟೇಗೌಡ ಉ/ಅಣ್ಣಯ್ಯ ಹೆಚ್.ಎಂ.ರಾಜು ಬಿನ್ ಲೇ:ಮೂಡ್ಲಿಗೌಡ | ಹೆಚ್ಎಂ.ಮಲ್ಲೇಗೌಡ ಹೆಚ್.ಎಂ.ಮಲ್ಲೇಗೌಡ ಸಣ್ಣಮ್ಮ ರಾಮಕ್ಕ ತಿಮ್ಮಮ್ಮ ಹೆಚ್.ಎಂ.ರಾಜು | 12/4 | ಹಾಸನ | 0.14 0.10 0-24 | ಖುಷ್ಕಿ ತರಿ | ಸ.ನಂ. 13 | ಸ.ನಂ. 12/3 12/10 | ಸ.ನಂ. 11 | ಸ.ನಂ. 28/1, 28/2 | 0.42 0.47 |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 9 | ಜವರಮ್ಮ ಕೋಂ. ನಂಜೇಗೌಡ | ಜವರಮ್ಮ | 12/8 | ಹಾಸನ | 0.05 | ಖುಷ್ಕಿ ತರಿ | ಸ.ನಂ 28/1 | ಸ.ನಂ. 12/7 | ಸ.ನಂ. 12/6 | ಸ.ನಂ. 28/1 | 0-24 |
| 10 | ಕೆ.ಎನ್.ತಿಮ್ಮೇಗೌಡ ಬಿನ್ ನಂಜೇಗೌಡ, ಹೆಚ್.ಎಂ.ಹನುಮಂತೇಗೌಡ ಬಿನ್ ಮಲ್ಲೇಗೌಡ | ಕೆ.ಎನ್.ತಮ್ಮಣ್ಣಗೌಡ ಹೆಚ್.ಎಂ. ಹನುಮಂತೇ ಗೌಡ | 12/9 ಪೈಕಿ | -;- | 0-07 | -;- | ಉಳಿಕೆ ಜಮೀನು ಮತ್ತು ಸ.ನಂ. 12/9 12/10 | ಸ.ನಂ. 12/1ಎ | ಉಳಿಕೆ ಜಮೀನು ಮತ್ತು ಸ.ನಂ. 11 | ಸ.ನಂ. 12/1ಎ | 0.28 |
| 11 | ನಾಗರತ್ನ ಕೋಂ.ನಾಗರಾಜ್ ಶ್ಯಾಮಲ ಬಿನ್ ನಾರಾಯಣ ಸಿ.ರಂಗೇಗೌಡ ಬಿನ್ ಚುಂಚನಗಿರಿಗೌಡ ಕೆ.ನಾಗರಾಜ್ ಬಿನ್ ಕೃಷ್ಣಪ್ಪ | ನಾಗರತ್ನ ಶ್ಯಾಮಲ ಸಿ.ರಂಗೇಗೌಡ ಕೆ.ನಾಗರಾಜ್ | 13 ಪೈಕಿ | ಹಾಸನ | 0-34 | ತರಿ | ಉಳಿಕೆ ಜಮೀನು ಮತ್ತು ಸ.ನಂ.9 | ಸ.ನಂ. 12/4 | ಸ.ನಂ. 10 | ಸ.ನಂ. 14/1ಬಿ | 3-31 |
| 12 | ವಿ.ಬಿ.ರಾಣಿ ಕೋಂ.ಲೇ:ಸಿ.ಎನ್.ದೇವರಾಜ್ ಸುಶೀಲಮ್ಮ ಕೋಂ. ಕಾಳೇಗೌಡ | ವಿ.ಬಿ.ರಾಣಿ ಸುಶೀಲಮ್ಮ | 21 | ;; | 1-00 | ;; | ಸ.ನಂ. 62 | ಸ.ನಂ. 61/4 | ಸ.ನಂ. 22 | ಚನ್ನ ಪಟ್ಟಣ ಗಡಿ | 1-86 |
| 13 | ಹುಚ್ಚೇಗೌಡ ಬಿನ್ ಪ:ದ್ಯಾವೇಗೌಡ, ಮಂಜುನಾಥ ಪ್ರಸನ್ನ ಬಿನ್ ದ್ಯಾವೇಗೌಡ | ಹುಚ್ಚೇಗೌಡ ಮಂಜುನಾಥ ಪ್ರಸನ್ನ | 24 | ;; | 1-37 | ;; | ಸ.ನಂ. 25 | ಸ.ನಂ.22 | ಸ.ನಂ 27/1 | ಸ.ನಂ.23 | 3-78 |
| 14 | ಪದ್ಮಪ್ರಸಾದ್ ಬಿನ್ ಆದಿರಾಜಯ್ಯ ಶಕುಂತಳ ಕೋಂ.ಆದಿರಾಜಯ್ಯ | ಪದ್ಮಪ್ರಸಾದ್ ಶಕುಂತಳ | 26 | ಹಾಸನ | 0-25 | ತರಿ | ಸ.ನಂ. 14/3ಎ3ಬಿ | ಸ.ನಂ. 27/3 | ಸ.ನಂ. 14/2ಎ | ಸ.ನಂ. 25, 27/1 | 1-17 |
| 15 | ಹುಚ್ಚೇಗೌಡ ಬಿನ್ ಪಟೇಲ್ ದ್ಯಾವೇಗೌಡ, ಮಂಜುನಾಥ ಪ್ರಸನ್ನ ಬಿನ್ ಪಟೇಲ್ ದ್ಯಾವೇಗೌಡ, | ಹುಚ್ಚೇಗೌಡ ಮಂಜುನಾಥ ಪ್ರಸನ್ನ | 27/ಸಿ | ;; | 0-27 | ;; | ಸ.ನಂ. 26 | ಸ.ನಂ 27/2 | ಸ.ನಂ. 14/1ಬಿ, 14/2ಎ | ಸ.ನಂ. 27/1 | 1-08 |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 16 | ಎಂ.ಬೋರೇಗೌಡ ಬಿನ್ ಮಾಯಿಗೌಡ | ಎಂ. ಬೋರೇಗೌಡ | 28/2 ಪೈಕಿ | ;; | 0-06 | ;; | ಸ.ನಂ. 14/1B27/2 22 | ಸ.ನಂ 28/1 | ಸ.ನಂ. 12/4, 13 | ಉಳಿಕೆ ಜಮೀನು ಮತ್ತು ಸ.ನಂ. 61/1, 22 | 1-43 |
| 17 | ಹುಚ್ಚೇಗೌಡ ಬಿನ್ ಪಟೇಲ್ ದ್ಯಾವೇಗೌಡ, ಮಂಜುನಾಥ ಬಿನ್ ಪ್ರಸನ್ನ ಉ: ದ್ಯಾವೇಗೌಡ | ಹುಚ್ಚೇಗೌಡ ಮಂಜುನಾಥ ಪ್ರಸನ್ನ | 31 | ;; | 0-10 | ;; | ಸ.ನಂ. 32 | ಸ.ನಂ. 30/2 | ಸ.ನಂ. 29 | ಕಾಲುವೆ | 0-47 |
| 18 | ರಾಮಣ್ಣ ಬಿನ್ ಸಣ್ಣತಮ್ಮೇಗೌಡ | ರಾಮಣ್ಣ | 33/1 | ;; | 0-15 | ;; | ಸ.ನಂ. 33/2 | ಸ.ನಂ.32 | ಸ.ನಂ. 29 | ಕಾಲುವೆ | 0-71 |
| 19 | ರಾಮಣ್ಣ ಬಿನ್ ಸಣ್ಣತಮ್ಮೇಗೌಡ | ರಾಮಣ್ಣ | 35/1 | ;; | 0-26 ಖ–0-02 | ;; | ಸ.ನಂ. 35/2ಎ, 2ಬಿ, 2ಸಿ | ಸ.ನಂ.36 | ಕಾಲುವೆ | ಗ್ರಾಮದ ಗಡಿ | 1-16 |
| 20 | ರಾಮಣ್ಣ ಬಿನ್ ಸಣ್ಣತಮ್ಮೇಗೌಡ | ರಾಮಣ್ಣ | 35/2ಎ | ;; | 0-05 | ;; | ಸ.ನಂ. 34 | ಸ.ನಂ .35/1 | ಕಾಲುವೆ | ಸ.ನಂ.35/2 ಬಿ | 0-23 |
| 21 | ರಾಮಣ್ಣ ಬಿನ್ ಸಣ್ಣತಮ್ಮೇಗೌಡ | ರಾಮಣ್ಣ | 35/2ಬಿ | ;; | 0-16 | ;; | ಸ.ನಂ .34 | ಸ.ನಂ 35/1 | ಸ.ನಂ. 35/2ಎ | ಸ.ನಂ 35/2ಸಿ | 0-46 |
| 22 | ರಾಮಣ್ಣ ಬಿನ್ ಸಣ್ಣತಮ್ಮೇಗೌಡ | ರಾಮಣ್ಣ | 35/2C | ;; | 0-09 | ;; | ಸ.ನಂ .34 | ಸ.ನಂ. 35/1 | ಸ.ನಂ. 35/2ಬಿ | ಗ್ರಾಮದ ಗಡಿ | 0-71 |
| 23 | ಹುಚ್ಚೇಗೌಡ ಬಿನ್ ಪ:ದ್ಯಾವೇಗೌಡ, ಮಂಜುನಾಥ ಪ್ರಸನ್ನ ಬಿನ್ ದ್ಯಾವೇಗೌಡ | ಹುಚ್ಚೇಗೌಡ ಮಂಜುನಾಥ ಪ್ರಸನ್ನ | 37 | ;; | 0-31 ಖ-0-02 | ;; | ಸ.ನಂ. 36 | ಸ.ನಂ. 38/2,3 | ಕಾಲುವೆ | ಚನ ಪಟ್ಟಣ ಗಡಿ | 1-45 |
| 24 | ಬೋರೇಗೌಡ ಬಿನ್ ನಿಂಗೇಗೌಡ. | ಬೋರೇಗೌಡ | 42/1 ಪೈಕಿ | ;; | 0-10½ | ;; | ಸ.ನಂ. 42/2 | ಸ.ನಂ. 43/7, 43/8, 43/9 | ಸ.ನಂ. 50 | ಉಳಿಕೆ ಜಮೀನು ಮತ್ತು ಚನ್ನಪಟ್ಟಣ ಗಡಿ | 0-98 |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ **ಸರ್ವೆ.ನಂ.** | ದಕ್ಷಿಣ ಸರ್ವೆ.ನಂ. | |
| 25 | ಜವರಮ್ಮ ಕೋಂ.ಸಣ್ಣರಾಮೇಗೌಡ | ಜವರಮ್ಮ | 43/7 | ;; | 0-06 | ;; | ಸ.ನಂ. 42/1 | ಸ.ನಂ. 43/2,5 | ಸ.ನಂ. 50 | ಸ.ನಂ. 43/8 | 0-27 |
| 26 | ಸಿ.ಆರ್. ಅಣ್ಣಯ್ಯಪ್ಪ ಬಿನ್ ರಾಮೇಗೌಡ | ರಾಮ | 43/8 | ;; | 0-04<br>0-01ಖ | ;; | ಸ.ನಂ. 42/1 | ಸ.ನಂ. 43/5 | ಸ.ನಂ. 43/7 | ಸ.ನಂ. 43/9 | 0-23 |
| 27 | ನಂಜೇಗೌಡ ಬಿನ್ ಚಲುವೇಗೌಡ ಉ: ಅಣ್ಣೇಗೌಡ | ನಂಜೇಗೌಡ | 43/9 | ;; | 0-03 | ;; | ಸ..ನಂ .42/1 | ಸ.ನಂ. 43/6 | ಸ.ನಂ 43/8 | ಗಡಿ | 0-14 |
| 28 | ಜೈತುಂಬಿ ಕೋಂ.ಬಾಬಸಾಹೇಬ | ಜೈತುಂಬಿ | 58/2 | ;; | 0-08 | ;; | ಸ.ನಂ 58/1 | ಸ.ನಂ. 68/1 | ಸ.ನಂ. 68/2 | ಕಾಲುವೆ | 0-40 |
| 29 | ಅಣ್ಣೇಗೌಡ ಬಿನ್ ಜವರೇಗೌಡ | ಅಣ್ಣೇಗೌಡ | 65/1 | ;; | 0-22 | ;; | ಸ.ನಂ. 65/2 | ಸ.ನಂ. 71/2,3 | ಕಾಲುವೆ | ಸ.ನಂ. 66 | 0-22 |
| 30 | ರಾಮೇಗೌಡ ಬಿನ್ ಜವರೇಗೌಡ | ರಾಮೇಗೌಡ | 65/2 | ;; | 0-26 | ;; | ಸ.ನಂ. 56,64 | ಸ.ನಂ. 65/1 | ಕಾಲುವೆ | ಸ.ನಂ. 63,66 | 0-26 |
| 31 | ಜೈತುಂಬಿ ಕೋಂ.ಬಾಬಾಸಾಹೇಬ | ಜೈತುಂಬಿ | 67/2 | ;; | 0-01 ½ | ;; | ಸ.ನಂ. 63 | ಸ.ನಂ. 67/1 | ಸ.ನಂ. 66 | ಸ.ನಂ. 68/2 | 0-24 |
| 32 | ಜೈತುಂಬಿ ಕೋಂ.ಬಾಬಾಸಾಹೇಬ | ಜೈತುಂಬಿ | 68/2 | ;; | 0-10<br>0-04 ಖ | ;; | ಸ.ನಂ. 59, 60 | ಸ.ನಂ. 68/1 | ಸ.ನಂ. 67/1,2 | ಸ.ನಂ. 58/1,2 | 0-69 |
| 33 | ನಿಂಗಮ್ಮ ಕೋಂ.ಹೆಚ್.ವಿ.ಲಕ್ಕಪ್ಪ | ನಿಂಗಮ್ಮ | 69 | ;; | 0-07<br>0-01ಖ | ;; | ಸ.ನಂ. 68/1 | ಸ.ನಂ. 71/1 | ಸ.ನಂ. 70/2 | ಸ.ನಂ. 72 | - |
| 34 | ಸಿ.ವಿ.ತಿಮ್ಮಪ್ಪ ಉ: ಪಾಪಣ್ಣ ಬಿನ್ ತಮ್ಮೇಗೌಡ | ಸಿ.ವಿ.ತಿಮ್ಮಪ್ಪ | 74/1 ಪೈಕಿ | ;; | 1-00<br>0-08ಖ | ;; | ಉಳಿಕೆ ಜಮೀನು ಮತ್ತು ಸ.ನಂ. 74/2,3 | ಸ.ನಂ. 92 | ಕಾಲುವೆ | ಸ.ನಂ. 76/5, 75/1 | 4-32 |
| 35 | ಕೆ.ಟಿ.ವೆಂಕಟಕೃಷ್ಣೇಗೌಡ ಬಿನ್ ಸಿ.ವಿ.ತಿಮ್ಮಪ್ಪ | ಕೆ.ಟಿ.ವೆಂಕಟ ಕೃಷ್ಣೇಗೌಡ | 74/3 ಪೈಕಿ | ;; | 0-14<br>0-03ಖ | ;; | ಸ.ನಂ. 45 | ಸ.ನಂ. 74/1 | ಸ.ನಂ. 74/2 | ಉಳಿಕೆ ಜಮೀನು ಮತ್ತು ಸ.ನಂ. 75/1 | 0-69 |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 36 | ಕೆ.ಟಿ.ವೆಂಕಟಕೃಷ್ಣೇಗೌಡ ಬಿನ್ ಸಿ.ವಿ.ತಿಮ್ಮಪ್ಪ, ಸಿ.ವಿ.ತಿಮ್ಮಪ್ಪ ಉ:ಪಾಪಣ್ಣ ಬಿನ್ ತಮ್ಮೇಗೌಡ | ಕೆ.ಟಿ.ವೆಂಕಟಕೃಷ್ಣೇ ಗೌಡ, ಸಿ.ವಿ.ತಿಮ್ಮಪ್ಪ | 75/1 | ;; | 2-12<br>0-02ಖ | ;; | ಸ.ನಂ. 44/1, 75/2 | ಸ.ನಂ. 76/5 | ಸ.ನಂ. 74/1,3 | ಚನ್ನ ಪಟ್ಟಣ ಗಡಿ | 4-33 |
| 37 | ಸಿ.ವಿ.ತಿಮ್ಮಪ್ಪ ಉ:ಪಾಪಣ್ಣ ಬಿನ್ ತಿಮ್ಮೇಗೌಡ | ಸಿ.ವಿ.ತಿಮ್ಮಪ್ಪ | 75/2 | ;; | 0-20<br>0-02 ಖ | ;; | ಸ.ನಂ. 44/1 | ಸ.ನಂ. 75/1 | ಸ.ನಂ. 75/1 | ಗಡಿ | 0-99 |
| 38 | ಕೆ.ಟಿ.ವೆಂಕಟಕೃಷ್ಣೇಗೌಡ ಬಿನ್ ಸಿ.ವಿ.ತಿಮ್ಮಪ್ಪ | ಕೆ.ಟಿ.ವೆಂಕಟ ಕೃಷ್ಣೇಗೌಡ | 76/4 | ;; | 1-32<br>ಖ–0-04 | ;; | ಸ.ನಂ. 76/5 | ಸ.ನಂ. 76/3 | ಸ.ನಂ. 92 | ಸ.ನಂ. 76/5 | 3-35 |
| 39 | ಸಿ.ವಿ.ತಿಮ್ಮಪ್ಪ ಉ:ಪಾಪಣ್ಣ ಬಿನ್ ತಮ್ಮೇಗೌಡ | ಸಿ.ವಿ.ತಿಮ್ಮಪ್ಪ | 76/5 | ;; | 1-04<br>1-17<br>2-21<br>ಖ–0-09 | ಖುಷ್ಕಿ<br>ತರಿ | ಸ.ನಂ. 75/1 | ಸ.ನಂ. 76/3, 76/4 | ಸ.ನಂ. 74/1 | ಸ.ನಂ. 77, ಗಡಿ | 4-50 |
| 40 | ದೇವರಾಜು ಬಿನ್ ಸಿ.ಎಂ. ನಂಜಪ್ಪ ಬಸವರಾಜು ಬಿನ್ ಸಿ.ಎಂ.ನಂಜಪ್ಪ, ಜಯಕುಮಾರ ಬಿನ್ ಸಿ.ಎಂ.ನಂಜಪ್ಪ, ಸಿ.ಎಂ.ನಂಜುಂಡಪ್ಪ ಬಿನ್ ನಂಜಪ್ಪ | ಸಿ.ಎಂ.ನಂಜುಂಡಪ್ಪ, ದೇವರಾಜು ಬಸವರಾಜು ಜಯ ಕುಮಾರ್ | 77/1 | ;; | 0-39 | ತರಿ | ಸ.ನಂ. 77/2 | ಸ.ನಂ. 81/1 | ಸ.ನಂ. 76/3 76/5 | ರಾ. ಹೆದ್ದಾರಿ | 1-72 |
| 41 | ಸದಾಶಿವಪ್ಪ ಬಿನ್ ಸಣ್ಣಯ್ಯ ಶಿವಶಂಕರ ಬಿನ್ ಸಣ್ಣಯ್ಯ | ಸದಾಶಿವಪ್ಪ ಶಿವಶಂಕರ | 81/2 | ;; | 0-06 | ;; | ಸ.ನಂ. 81/1 | 82 | ಸ.ನಂ. 82 | ರಾಷ್ಟ್ರೀಯ ಹೆದ್ದಾರಿ | 0-23 |
| 42 | ಕೋಮಲ ಕೋಂ.ಕೃಷ್ಣೇಗೌಡ ರೇಣುಕಾ ಕೋಂ.ಯೋಗೇಶ್ ಸುರೇಖಾ ಉ: ಶಾಂತಳ ಕೋಂ. ರಾಮಚಂದ್ರೇಗೌಡ ಸುಜಾತ ಕೋಂ. ನಾಗರಾಜು | ಕೋಮಲ ರೇಣುಕಾ ಸುರೇಖಾ ಸುಜಾತ | 91 | ;; | 1-37 | ;; | ಸ.ನಂ. 92, 84 | ರಸ್ತೆ | ಕಾಲುವೆ | 85 | 3-97 |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 43 | ಸಿ.ಬಿ.ತಿಮ್ಮಪ್ಪ ಬಿನ್ ತಿಮ್ಮೇಗೌಡ | ಸಿ.ವಿ.ತಿಮ್ಮಪ್ಪ | 92ಪೈಕಿ | ;; | 0-37 0-08ಖ | ;; | ಉಳಿಕೆ ಜಮೀನು ಮತ್ತು ಸ.ನಂ. 74/1 | ಸ.ನಂ. 91, ಮತ್ತು ಕಾಲುವೆ | ಕಾಲುವೆ | ಸ.ನಂ. 76/1, 2,3,4, 84 | 7-94 |
| 44 | ಅರ್ಚಕ ವೆಂಕಟಪತಯ್ಯ | ಅ.ವೆಂಕಟಪತಯ್ಯ | 94 | | 1-36 | ;; | ಸ.ನಂ. 73/1 | ಸ.ನಂ. 98,93 | ಸ.ನಂ. 95,96 | ಕಾಲುವೆ | 3-73 |
| 45 | ಪಾರ್ವತಮ್ಮ ಕೋಂ.ಲೇ:ಮಲ್ಲಪ್ಪ | ಪಾರ್ವತಮ್ಮ | 99ಪೈಕಿ | ;; | 2-10 | ;; | ಸ.ನಂ. 97,98 | ಸ.ನಂ. 100 | ಕಾಲುವೆ | ಸ.ನಂ. 93 | 7-08 |
| | **ಚನ್ನ ಪಟ್ಟಣ** | | | | | | | | | | |
| 46 | ಪುಟ್ಟಮ್ಮ ಬಿನ್ ಚುಂಚನಗಿರಿಗೌಡ | ಪುಟ್ಟಮ್ಮ | 61/2 | ಚನ್ನ ಪಟ್ಟಣ | 0-08 | ತರಿ | ಸ.ನಂ. 22 | ಸ.ನಂ. 60/1 | ಸ.ನಂ. 61/1 | ಸ.ನಂ. 61/3 | 0-39 |
| 47 | ಬೋರೇಗೌಡ ಬಿನ್ ಚುಂಚನಗಿರಿಗೌಡ | ಬೊರೇಗೌಡ | 63/3 | ;; | 0-03 | ;; | ಸ.ನಂ. 20 | ಸ.ನಂ. 64/4 | ಸ.ನಂ. 63/2 | ಉಳಿಕೆ ಜಮೀನು ಮತ್ತು ಸ.ನಂ. 64/2B | 0-56 |
| 48 | ಬೋರೇಗೌಡ ಬಿನ್ ಚುಂಚನಗಿರಿಗೌಡ | ಬೋರೇಗೌಡ | 64/1 | ;; | 0-04 ½ | ;; | ಉಳಿಕೆ ಜಮೀನು ಮತ್ತು ಸ.ನಂ. 23, 63/1, 63/2 | ಸ.ನಂ. 62 | ಸ.ನಂ. 23 | ಸ.ನಂ. 64/4 | 2-00 |
| 49 | ಸೊಪ್ಪಿನ ತೋಟ | – | 65 | ;; | ಖ–0-19 | ;; | ಸ.ನಂ. 64/2ಎ1 & 2ಎ2 | ಸ.ನಂ. 66,20 | ಸ.ನಂ. 66 | ಹಳ್ಳ | - |

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | | | ಪೂರ್ವ ಸರ್ವೆ.ನಂ. | ಪಶ್ಚಿಮ ಸರ್ವೆ.ನಂ. | ಉತ್ತರ ಸರ್ವೆ.ನಂ. | ದಕ್ಷಿಣ ಸರ್ವೆ.ನಂ. | |
| 50 | ಈರಯ್ಯ ಉ: ಸಣ್ಣಯ್ಯ ಬಿನ್ ಕಳಸಯ್ಯ ಉ:ಪೋಟಯ್ಯ, ಸಿ.ಜೆ.ಹುಚ್ಚಯ್ಯ ಬಿನ್ ಗಿಡ್ಡಯ್ಯ, ಪುಟ್ಟರಾಜು ಬಿನ್ ಲಕ್ಕಯ್ಯ, ಗಿಡ್ಡಯ್ಯ, ದ್ಯಾವಮ್ಮ ಕೋಂ.ಲೇ.ಹುಚ್ಚಯ್ಯ | ಈರಯ್ಯ ಸಿ.ಜೆ.ಹುಚ್ಚಯ್ಯ ಪುಟ್ಟರಾಜು ಗಿಡ್ಡಯ್ಯ ದ್ಯಾವಮ್ಮ | 66ಪೈಕಿ | ;; | 1-05 0-01ಖ | ;; | ರಸ್ತೆ | ಸ.ನಂ. 65,20 | 16,17, 18,19 | ಹಳ್ಳ | 2-09 |
| | | ಒಟ್ಟು | | | **32-19½** | – | - | – | - | - | - |

ಒಟ್ಟು ವಿಸ್ತೀರ್ಣ ಹಾಸನ ಗ್ರಾಮ ಚನ್ನಪಟ್ಟಣ ಗ್ರಾಮ

| ಹಾಸನ ಗ್ರಾಮ | | | ಚನ್ನಪಟ್ಟಣ ಗ್ರಾಮ | |
|---|---|---|---|---|
| ಖುಷ್ಕಿ | 2-12 | | ಖುಷ್ಕಿ | - |
| ತರಿ | 26-19 | | ತರಿ | 1-20½ |
| ಬಾಗಾಯ್ತು | 0-04 | | ಬಾಗಾಯ್ತು | - |
| ಖರಾಬು | 1-14 | | ಖರಾಬು | 0-20 |
| ಒಟ್ಟು | 30-19 | | ಒಟ್ಟು | 2-00½ |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯಿದೆ, 1966ರ ಪ್ರಕರಣ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಈ ಕೆಳಕಂಡ ಜಿಲ್ಲೆಗಳಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರುಗಳ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1. | ಧಾರವಾಡ | ಶ್ರೀ ಶಾನಪ್ಪಗೌಡ ರಾಮನಗೌಡ ಪಾಟೀಲ, ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಲಘಟಗಿ. |
| 2. | ಹಾವೇರಿ | ಶ್ರೀ ಪುಟ್ಟಪ್ಪ ಕಲ್ಲಪ್ಪ ಕುಂದಗೋಳ ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಶಿಗ್ಗಾಂವ್ |

ಪಿ.ಆರ್. 384

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು-01**

**ಅಧಿಸೂಚನೆ ಸಂಖ್ಯೆ: ಕೃಮಾಇ/41/ನಿಯವಿ/2005, ದಿನಾಂಕ: 23ನೇ ಫೆಬ್ರವರಿ 2005**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (3)ರ ಮೇರೆಗೆ ಕರ್ನಾಟಕ ರಾಜ್ಯ ಮಾರುಕಟ್ಟೆಗಳ ಮುಖ್ಯಾಧಿಕಾರಿಗಳು ಹೊರಡಿಸಿದ ದಿನಾಂಕ: 05.09.1986ರ ಅಧಿಸೂಚನೆ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಮೂಲಕ ತುಮಕೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ತುಮಕೂರು ನಗರ ಪುರಸಭೆ ಎಲ್ಲೆ ಮತ್ತು ಬಟವಾಡೆ ಗ್ರಾಮದ ಎಲ್ಲೆಗಳನ್ನೊಳಗೊಂಡ ಪ್ರದೇಶವನ್ನು ಮಾರುಕಟ್ಟೆ ಎಂದು ಮತ್ತು ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸೀಮಾಬದ್ಧ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಲಾಗಿದೆ.

ಆದುದರಿಂದ ಈಗ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ ವ್ಯವಹಾರ (ನಿಯಂತ್ರಣ) ಅಧಿನಿಯಮ 1966ರ ಪ್ರಕರಣ 6ರ ಉಪ ಪ್ರಕರಣ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ತುಮಕೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಮಾರುಕಟ್ಟೆ ಉಪ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3. ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6. ಸಜ್ಜೆ, 7. ಜವೆ ಗೋಧಿ, 8. ಜೋಳ, 9. ಕಂಬು, 10. ಮೆಕ್ಕೆ ಜೋಳ, 11. ನವಣೆ, 12. ಭತ್ತ, 13. ರಾಗಿ, 14. ಅಕ್ಕಿ, 15. ಸಾಮೆ (ಸಾವೆ), 16. ಗೋಧಿ, 17. ಅಂಟುವಾಳ, 18. ಬೊಂಬು, 19. ಬೆತ್ತ, 20. ಹಿಪ್ಪೆಬೀಜ, 21. ಹೊಂಗೇಬೀಜ, 22. ಬೇವಿನಬೀಜ, 23. ಸೀಗೆಕಾಯಿ, 24. ಹುಣಸೇಹಣ್ಣು, 25. ಹುಣಸೇಬೀಜ, 26. ಸೇಬು, 27. ಬಾಳೆಹಣ್ಣು, 28. ಬೋರೆಹಣ್ಣು, 29. ಹುಳಿಹಣ್ಣುಗಳು, 30. ಚಕ್ಕೋತನ ಹಣ್ಣು, 31. ಪೇರಲೆಹಣ್ಣು, (ಸೀಬೆಹಣ್ಣು), 32. ದ್ರಾಕ್ಷಿ, 33. ಹಲಸಿನಹಣ್ಣು, 34. ಜಂಬುನೇರಳೆ ಹಣ್ಣು, 35. ನಿಂಬೆಹಣ್ಣು, 36. ಕರಬೂಜ, 37. ಮಾವಿನಹಣ್ಣು, 38. ಮೂಸಂಬಿ, 39. ಮರಸೇಬು, 40. ಪೈನಾಪಲ್ (ಅನಾನಸ್), 41. ಪಪ್ಪಾಯಿಹಣ್ಣು (ಪರಂಗಿಹಣ್ಣು), 42. ದಾಳಿಂಬೆಹಣ್ಣು, 43. ಸಪೋಟಾ, 44. ಸಿದ್ದೋಟ, 45. ಕಿತ್ತಳೆ, 46. ಕಲ್ಲಂಗಡಿ, 47. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), 48. ಹರಳುಬೀಜ, 49. ಹತ್ತಿಬೀಜ, 50. ಅಗಸೆಬೀಜ, 51. ಸಾಸುವೆ, 52. ಹುಚ್ಚೆಳ್ಳು, 53. ಕುಸುಬೆ, 54. ಎಳ್ಳು, 55. ಸೂರ್ಯಕಾಂತಿ ಬೀಜ, 56. ಸೋಯಾಬಿನ್, 57. ಅಡಿಕೆ, 58. ಗೋಡಂಬಿಬೀಜ, 59. ಒಣಮೆಣಸಿನಕಾಯಿ, 60. ತೆಂಗಿನಕಾಯಿ, 61. ಕೊಬ್ಬರಿ, 62. ಕೊತ್ತಂಬರಿಬೀಜ (ಧನಿಯಾ), 63. ಬೆಳ್ಳುಳ್ಳಿ, 64. ಶುಂಠಿ, 65. ಮೆಂತ್ಯ, 66. ಕಾಳುಮೆಣಸು, 67. ಅರಿಶಿನ, 68. ಅಲಸಂದೆ (ಇಡೀ ಮತ್ತು ಒಡೆದ), 69. ಅವರೆ (ಇಡೀ ಮತ್ತು ಒಡೆದ), 70. ಕಡಲೆ (ಇಡೀ ಮತ್ತು ಒಡೆದ), 71. ಉದ್ದು (ಇಡೀ ಮತ್ತು ಒಡೆದ), 72. ಬುಲ್ಲರ್ (ಇಡೀ ಮತ್ತು ಒಡೆದ), 73. ಹೆಸರು (ಇಡೀ ಮತ್ತು ಒಡೆದ), 74. ಹುರುಳಿ, 75. ಲಾಕ್ (ಇಡೀ ಮತ್ತು ಒಡೆದ), 76. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77. ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78. ಬಟಾಣಿ, 79. ತೊಗರಿ (ಇಡೀ ಮತ್ತು ಒಡೆದ), 80. ಮೋತ್ (ಇಡೀ ಮತ್ತು ಒಡೆದ), 81. ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ), 82. ಕಾಯಿಗಳು, 83 ಹಸಿರುಮೆಣಸಿನ ಕಾಯಿ, 84. ಈರುಳ್ಳಿ, 85. ಆಲೂಗಡ್ಡೆ, 86. ಸುವರ್ಣಗೆಡ್ಡೆ, 87. ಸಿಹಿಗೆಣಸು (ಗೆಣಸು), 88. ಟೊಮ್ಯಾಟೋ, 89. ಬೀಟೆ (ರೋಸ್‌ವುಡ್), 90. ಬಿಲ್ವಾಲ, 91. ಉರುವಲು ಕಟ್ಟಿಗೆ, 92. ಗಂಜಾನ್, 93. ಹಡಗ, 94. ಹಳದಿ, 95. ಹನಿಮತ್ತಲ್, 96. ಹೊನ್ನೆ, 97. ಐಯಾನಿ, 98. ಹಲಸಿನಮರ, 99. ಜಂಬ, 100. ಕಲನ್, 101. ಕಿಂಡಲ್, 102. ಮಾವಿನಮರ, 103.ಮತ್ತಿ, 104. ನಂದಿ, 105. ರಾಂಪತ್ರೆ, 106. ತೇಗ (ಸಾಗವಾನಿ), 107. ಬಿಳಿ ದೇವದಾರು (ಕೇದರ), 108. ಸಿಲ್ವರ್ ಓಕ್, 109. ನೀಲಗಿರಿ, 110. ವೀಳ್ಯೆದೆಲೆ, 111. ಬೆಲ್ಲ, 112. ತೆಂಗಿನಕಡ್ಡಿ, 113. ಒಣದ್ರಾಕ್ಷಿ.

**ಅನುಸೂಚಿ**

ತುಮಕೂರು ಪಟ್ಟಣದ ಜೆ.ಸಿ. ರಸ್ತೆಗೆ ಹೊಂದಿಕೊಂಡಂತಿರುವ 53 X 110 ಚದರ ಮೀಟರ್‌ನ ಈ ಕೆಳಗಿನ ಸೀಮಾಬದ್ಧ ಸ್ಥಳ

ಪೂರ್ವಕ್ಕೆ - ಜೆ.ಸಿ. ರಸ್ತೆ
ಪಶ್ಚಿಮಕ್ಕೆ - ವಿಘ್ನೇಶ್ವರ 1ನೇ ಮುಖ್ಯರಸ್ತೆ
ದಕ್ಷಿಣಕ್ಕೆ - ನಗರ ಸಭೆಯ ಆಸ್ತಿ ಮತ್ತು ಮಹಿಳಾ ಕೋ-ಆಪರೇಟಿವ್ ಬ್ಯಾಂಕ್ ಶಾಖೆ, ತುಮಕೂರು.
ಉತ್ತರಕ್ಕೆ - ನಗರ ಸಭೆಯ ದೊಡ್ಡ ಚರಂಡಿ.

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

ಪಿ.ಆರ್. 383

**GOVERNMENT OF INDIA**
**MINISTRY OF LABOUR**
**LABOUR BUREAU**
**'Cleremount' Shimla-171004 Dated: 7th February 2005**
**CONSUMER PRICE INDEX NUMBERS FOR INDUSTRIAL WORKERS**

State: Karnataka (Base: 1982=100) Month: December 2004

| Code | | Group/Sub-group/Centre | Bangalore | Belgaum | Hubli Dharwar | Mercara |
|---|---|---|---|---|---|---|
| 1000 | IA. | **FOOD:** | | | | |
| 1100 | | (a) Cereals & Products | 426 | 562 | 487 | 453 |
| 1200 | | (b) Pulses & Products | 542 | 518 | 540 | 574 |

| Code | | Group/Sub-group/Centre | Bangalore | Belgaum | Hubli Dharwar | Mercara |
|---|---|---|---|---|---|---|
| 1300 | | (c) Oils & Fats | 412 | 374 | 402 | 424 |
| 1400 | | (d) Meat, Fish & Eggs | 635 | 611 | 579 | 591 |
| 1500 | | (e) Milk & Products | 382 | 527 | 442 | 460 |
| 1600 | | (f) Condiments & Spices | 491 | 581 | 531 | 510 |
| 1700 | | (g) Vegetables & Fruits | 486 | 449 | 523 | 478 |
| 1800 | | (h) Other Food | 757 | 736 | 702 | 780 |
| 1000 | | **FOOD GROUP** | 517 | 571 | 532 | 536 |
| 2000 | I. | Pan, Supari, Tobacco & Intoxicants | 661 | 600 | 572 | 523 |
| 3000 | II. | Fuel & Light | 814 | 669 | 545 | 459 |
| 4000 | III. | Housing Index | 585 | 717 | 577 | 195 |
| 5000 | IV. | Clothing, Bedding & Footwear | 289 | 279 | 323 | 430 |
| 6000 | V. | **Miscellaneous:** | | | | |
| 6100 | | (a) Medical Care | 495 | 552 | 506 | 539 |
| 6200 | | (b) Education, Recreation & Amusement | 420 | 724 | 579 | 617 |
| 6300 | | (c) Transport & Communication | 654 | 452 | 660 | 646 |
| 6400 | | (d) Personal Care & effects | 491 | 444 | 515 | 458 |
| 6500 | | (e) Others | 518 | 564 | 443 | 481 |
| 6600 | | Miscellaneous Group | 511 | 536 | 522 | 519 |
| | | **GENERAL INDEX** | **515** | **571** | **528** | **499** |

ಜಂಟಿ ನಿರ್ದೇಶಕರು,

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

**DIRECTORATE OF ECONOMICS & STATISTICS BANGALORE-1**

**Consumer Price Index Numbers for Industrial Workers**

No. DES 24 PWX 2004 Month: December 2004

State: Karnataka Base: 1987-88=100 Date : 09-02-2005

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:** | | | | | | | | | | | | |
| | (a) Cereals & Products | 333 | 398 | 374 | 343 | 368 | 351 | 335 | 340 | 279 | 376 | 341 | 340 |
| | (b) Pulses & Products | 300 | 306 | 310 | 334 | 311 | 279 | 310 | 321 | 291 | 308 | 311 | 325 |
| | (c) Oils & Fats | 238 | 279 | 247 | 262 | 268 | 256 | 261 | 267 | 263 | 277 | 273 | 266 |
| | (d) Meat, Fish & Eggs | 341 | 372 | 365 | 407 | 374 | 340 | 328 | 347 | 532 | 385 | 389 | 346 |
| | (e) Milk & Products | 343 | 262 | 318 | 313 | 306 | 267 | 251 | 342 | 289 | 257 | 307 | 281 |
| | (f) Condiments & Spices | 222 | 315 | 360 | 403 | 284 | 274 | 279 | 246 | 244 | 292 | 259 | 318 |
| | (g) Vegetables & Fruits | 225 | 313 | 262 | 340 | 251 | 247 | 310 | 332 | 225 | 270 | 222 | 471 |
| | (h) Other Food | 305 | 359 | 335 | 345 | 287 | 313 | 308 | 302 | 318 | 273 | 309 | 333 |
| | **FOOD GROUP** | **301** | **345** | **337** | **341** | **320** | **304** | **307** | **325** | **324** | **313** | **315** | **334** |
| II. | Pan, Supari, Tobacco & Intoxicants | 308 | 350 | 338 | 342 | 386 | 439 | 351 | 472 | 295 | 329 | 352 | 385 |
| III. | Fuel & Light | 305 | 316 | 273 | 456 | 299 | 316 | 343 | 330 | 271 | 310 | 364 | 292 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 223 | 373 | 276 | 235 | 331 | 382 | 242 | 292 | 402 | 211 |
| VI. | **MISCELLANEOUS:** | | | | | | | | | | | | |
| | (a) Medical Care | 546 | 444 | 370 | 293 | 282 | 268 | 381 | 321 | 336 | 295 | 388 | 226 |
| | (b) Education, Recreation & Amusement | 341 | 329 | 521 | 206 | 389 | 409 | 309 | 282 | 344 | 373 | 375 | 366 |
| | (c) Transport & Communication | 415 | 398 | 332 | 333 | 595 | 352 | 347 | 560 | 420 | 492 | 388 | 383 |
| | (d) Personal Care & effects | 262 | 278 | 263 | 284 | 304 | 264 | 273 | 295 | 269 | 322 | 262 | 265 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|---|
| | (e) Others | 320 | 348 | 282 | 423 | 298 | 273 | 281 | 286 | 235 | 296 | 405 | 246 |
| | Miscellaneous Group index | 359 | 337 | 336 | 307 | 347 | 306 | 308 | 304 | 311 | 355 | 353 | 284 |
| | **GENERAL INDEX** | 284 | 305 | 293 | 323 | 293 | 277 | 289 | 306 | 289 | 286 | 312 | 272 |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

ಜಂಟಿ ನಿರ್ದೇಶಕರು,

ಪಿ.ಆರ್. 382 ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೊಲಕಲ್ಲು ಗ್ರಾಮದಲ್ಲಿ ಗ್ರೆ ಗ್ರಾನೈಟ್ ಶಿಲೆಗಾಗಿ ಮೆ: ಸೆಕ್ರೆಟರಿ ತಾವರೇಕೆರೆ, ಎಸ್.ಸಿ:ಎಸ್.ಟಿ. ಸ್ಟೋನ್ ಕಟರ್ಸ್ ಕೋ-ಆಪರೇಟೀವ್ ಸೊಸೈಟಿ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 141ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು-141:2004-05, 4378, ದಿನಾಂಕ: 8.11.2004.

2) ಉಪ ನಿರ್ದೇಶಕರು, ತುಮಕೂರು ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಕಗಗು-141:2004-05:4247, ದಿನಾಂಕ: 13.1.2005.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೊಲಕಲ್ಲು ಗ್ರಾಮ ಸರ್ವೆ ನಂ.50 ರಲ್ಲಿ ದಿ ಸೆಕ್ರೇಟರಿ ತಾವರೇಕೆರೆ, ಎಸ್.ಸಿ.ಎಸ್.ಟಿ. ಸ್ಟೋನ್ ಕಟರ್ಸ್ ಕೋ. ಆಪರೇಟೀವ್ ಸೊಸೈಟಿ ರವರಿಗೆ 3.00 ಎಕರೆಗೆ ದಿನಾಂಕ: 11.12.1997 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.93,650.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ. -

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:141:2004-05:16809, ದಿನಾಂಕ: 21ನೇ ಫೆಬ್ರವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೊಲಕಲ್ಲು ಗ್ರಾಮ ಸರ್ವೆ ನಂ.50 ರಲ್ಲಿ 3.00 ಎಕರೆಗೆ ಗ್ರೇ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 141ರ ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 385 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು, ಬೆಲಗಟ್ಟಿ ಗ್ರಾಮದಲ್ಲಿ ಗ್ರೀನ್ ಗ್ರಾನೈಟ್‌ಗಾಗಿ ಶ್ರೀ ಲಕ್ಷ್ಮಣ ಗೌಡ ದೇವನಗೌಡ ಪಾಟೀಲ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 438ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು-438:2004-05, 4081, ದಿನಾಂಕ: 26.10.2004.

2) ಹಿರಿಯ ಭೂವಿಜ್ಞಾನಿ (ಖ), ಧಾರವಾಡ ರವರ ಪತ್ರ ಸಂಖ್ಯೆ: ಧಾಜಿ:ಗಭೂಇ:ಕಗಗು:2004-05:3636 ದಿ: 8.11.2004.

**ಪ್ರಸ್ತಾವನೆ:**

ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು, ಬೆಲಗಟ್ಟಿ ಗ್ರಾಮದ ಸರ್ವೆ ನಂ.2:4ಬಿ:3 ರಲ್ಲಿ ಶ್ರೀ ಲಕ್ಷ್ಮಣ ಗೌಡ ದೇವನಗೌಡ ಪಾಟೀಲ್ ರವರಿಗೆ 1.00 ಎಕರೆಗೆ ದಿನಾಂಕ: 16.5.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.53,018/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಬಾಕಿ ಪಾವತಿಸದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿರುತ್ತದೆ.

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:438:2004-05:16800, ದಿನಾಂಕ: 21ನೇ ಫೆಬ್ರವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕಿನ, ಬೆಲಗಟ್ಟಿ ಗ್ರಾಮದ ಸರ್ವೆ ನಂ.2:4ಬಿ:3 ರಲ್ಲಿ 1.00 ಎಕರೆಗೆ ಗ್ರೀನ್ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 438ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 386 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**JYOTI ALLOYS PRIVATE LIMITED (in liquidation)**
**CORRIGENDUM**

Attention is invited to the notice of resolution of voluntary winding up under section 485 of the Companies Act, 1956 and notice of appointment of liquidator under section 516 (ibid), both published in the gazette dated 20th January 2005.

The date of incorporation/registration of the company at both the places shall be read as 14th June 1988, in place of 14th June 1998.

For Jyoti Alloys Private Limited (in liquidation)
**S.R. DESHPANDE**
P.D. 12 LIQUIDATOR

**FORM NO.155**
**(See Rule 329)**
**MEMBER'S VOLUNTARY WINDING-UP**

**Name of the Company:** Dresdner Kleinwort Capital Advisory Services (India) Private Limited 1305, 13th Upper Floor, Raheja Towers, East Wing, 26-27, M.G. Road, Bangalore-560 001.

**NOTICE CONVENING FINAL MEETING**

NOTICE is hereby given in pursuance of Section 509 that a General Meeting of the Members of the above named company will be held on Monday the 18th day of April 2005 at 10.30 A.M. at the registered office of the company at 1305, 13th Upper Floor, Raheja Towers, East Wing, 26-27, M.G. Road, Bangalore 560 001 for the purpose of having an account laid before them showing the manner in which the winding-up has been conducted and the property of the company disposed off and of hearing any explanation that may be given by the liquidator and also of determining by a Special Resolution by the company, the manner in which the books, accounts and documents of the company and of the liqudator shall be disposed off.

Dated this 4th day of March 2005.

**SAJI P. JOHN**
P.D. 13 LIQUIDATOR.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಹೊಲಕಲ್ಲು ಗ್ರಾಮದಲ್ಲಿ ಗ್ರೆ ಗ್ರಾನೈಟ್ ಶಿಲೆಗಾಗಿ ಶ್ರೀ ನಾಗರಾಜು ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 334ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು-334:2004-05:4406, ದಿನಾಂಕ: 09.11.2004.
2) ಹಿರಿಯ ಭೂವಿಜ್ಞಾನಿ (ಖ), ಧಾರವಾಡ ರವರ ಪತ್ರ ಸಂಖ್ಯೆ: ಉನಿತು:ಡಿಸಿಬಿ:ಕಗಗು-334:2004-05:2344, ದಿನಾಂಕ: 3.9.2004.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು, ಚಂದ್ರಗಿರಿ ಗ್ರಾಮದ ಹಳೆ ಸರ್ವೆ ನಂ.241/1 ಹೊಸ ನಂ.506 ರಲ್ಲಿ ಶ್ರೀ ನಾಗರಾಜು ರವರಿಗೆ 2.00 ಎಕರೆಗೆ ದಿನಾಂಕ: 22.5.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,48,696/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಬಾಕಿ ಪಾವತಿಸದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿರುತ್ತದೆ.

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:334:2004-05:16818, ದಿನಾಂಕ: 21ನೇ ಫೆಬ್ರವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು, ಚಂದ್ರಗಿರಿ ಗ್ರಾಮದ ಹಳೆ ಸರ್ವೆ ನಂ.241/1 ಹೊಸ ನಂ.506 ರಲ್ಲಿ 2.00 ಎಕರೆಗೆ ಮಲ್ಟಿ ಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 334ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸಿದ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 387 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.